INDIAN SCHOOL SERIES.

# THE SEVENTY STORIES, IN CANARESE;

FORMING

A SERIES OF PROGRESSIVE LESSONS,

*Especially adapted to the use of Canarese Students in their earlier Studies; and for Schools.*

ಎಪ್ಪತ್ತು ಕಥೆಗಳ ಪುಸ್ತಕವು.

*FIFTH EDITION.*

BANGALORE:

PRINTED AT THE WESLEYAN MISSION PRESS.

1860.

*PRICE SIX ANNAS.*

INDIAN SCHOOL SERIES.

# THE SEVENTY STORIES IN CANARESE;

FORMING

A SERIES OF PROGRESSIVE LESSONS,

ESPECIALLY

ADAPTED TO THE USE OF CANARESE STUDENTS

IN THEIR

EARLIER STUDIES, AND FOR SCHOOLS.

---

ಎಪ್ಪತ್ತು ಕಥೆಗಳ ಪುಸ್ತಕವು.

---

*FIFTH EDITION.*

---

BANGALORE:

PRINTED AT THE WESLEYAN MISSION PRESS.

1860.

☞ The Publication of the "*Seventy Stories*," is designed to supply, in some measure, the want of books written in an easy and familiar style, and adapted to the use of beginners. As a further help, sandhi is almost wholly omitted, and spaces introduced between the words, as is usual in the writings of every civilized people.

As several stories in the original collection were unsuitable for publication, they have been omitted, and *Nos.* 28, 42, 45, 53, 58, 68, 69, and 70, substituted from other native books. *No.* 67 is a translation from the English.



# CONTENTS.

# THE SEVENTY STORIES.

## ಎಪ್ಪತ್ತು ಕಥೆಗಳು.

### ೧. ಕಥೆ.

ವಿದ್ವಾಂಸನನೂ ಆತನ ಇಬ್ಬರು ಮಕ್ಕಳನೂ ಕುರಿತದ್ದು.

ಕಾಶಿಯಲ್ಲಿ ಒಬ್ಬ ವಿದ್ವಾಂಸನು ಇದ್ದನು. ಆತನಿಗೆ ಇಬ್ಬರು ಮಕ್ಕಳು; ಆತನು ದೊಡ್ಡ ಮಗನಿಗೆ ತನ್ನ ಆಸ್ತಿ ಎಲ್ಲಾ ಕೊಟ್ಟನು; ಚಿಕ್ಕವನಿಗೆ ಚನ್ನಾಗಿ ವಿದ್ಯವನ್ನು ಕಲಿಸಿದನು. ದೊಡ್ಡವನು ಕೆಲವು ದಿವಸಗಳಲ್ಲಿ ಆಸ್ತಿ ಎಲ್ಲಾ ಖರ್ಚು ಮಾಡಿ, ದರಿದ್ರನು ಆದನು. ಚಿಕ್ಕವನು ತನ್ನ ಪಾಂಡಿತ್ಯದಿಂದ ತುಂಬಾ ಹಣವನ್ನು ಸಂಪಾದಿಸಿ, ಸುಖವಾಗಿ ಇದ್ದನು. ಆದಕಾರಣ ವಿದ್ಯ ಕಲಿತವನು ಸುಖ ಪಡುವನು.

### ೨. ಕಥೆ.

ಇಬ್ಬರು ಹುಡುಗರನೂ ಮಾವಿನ ಮರವನೂ ಕುರಿತದ್ದು.

ಒಬ್ಬ ಹುಡುಗನು ಇದ್ದನು. ಅವನು ಒಂದು ತೋಟಕ್ಕೆ ಹೋಗಿ, ಅಲ್ಲಿ ಒಂದು ಮಾವಿನ ಗಿಡದ ಮೇಲೆ ಒಳ್ಳೇ ಹಣ್ಣು ನೋಡಿ, ಇದನ್ನು ಕೊಯಿದು ಭಕ್ಷಿಸಬೇಕೆಂದು ಅಪೇಕ್ಷಿಸಿ, ಕೊಯ್ಯುವದಕ್ಕೆ ಹೋದನು. ಅದರ ಸುತ್ತು ಮುತ್ತು ಮುಳ್ಳಿನ ಬೇಲಿ ಇದ್ದದರಿಂದ, ಆ ಮುಳ್ಳಿಗೆ ಭಯಪಟ್ಟು, ಹಣ್ಣು ಕೊಯಿದು ಕೊಳ್ಳದೆ,

ಮನೆಗೆ ಹೋದನು. ಆಗ ಮತ್ತೊಬ್ಬ ಹುಡುಗನು ಆ ಹಣ್ಣನ್ನು ನೋಡಿ, ಸುತ್ತು ಇದ್ದ ಮುಳ್ಳಿನ ಬೇಲಿಗೆ ಭಯ ಪಡದೆ, ಮಾವಿನ ಮರವನ್ನು ಹತ್ತಿ, ಹಣ್ಣನ್ನು ಕೊಯಿದು ಕೊಂಡು, ಭಕ್ಷಿಸಿದನು. ಆದದರಿಂದ ಧೈರ್ಯ ಉಂಟಾದವರಿಗೆ ಭಾಗ್ಯ ಉಂಟಾಗುವದು.

## ೩. ಕಥೆ.

### ಹುಡುಗರನ್ನೂ ಕಪ್ಪೆಗಳನ್ನೂ ಕುರಿತದ್ದು.

ಒಂದು ದಿವಸ ಕೆಲವರು ಹುಡುಗರು ಒಂದು ಕೆರೇ ಕಟ್ಟೆಯ ಮೇಲೆ ಆಡುತ್ತಾ, ಆ ಕೆರೆಯಲ್ಲಿರುವ ಕಪ್ಪೆಗಳನ್ನು ನೋಡಿ, ಕಲ್ಲುಗಳನ್ನು ತೆಗದು ಕೊಂಡು, ಹೊಡೆದು, ಕೊಲ್ಲುತ್ತಾ ಬರಲಾಗಿ; ಆ ಕಪ್ಪೆಗಳೊಳಗೆ ಒಂದು ಆ ಹುಡುಗರನ್ನು ನೋಡಿ, ಓ ಹುಡುಗರೇ, ಕಲ್ಲುಗಳಿಂದ ನಮ್ಮನ್ನು ಹೊಡೆಯುವದು ನಿಮಗೆ ಆಟವಾಗಿದೆ; ಅದರಿಂದ ನಮ್ಮ ಪ್ರಾಣಗಳು ಹೋಗುತ್ತವೆ, ಎಂದು ಹೇಳಿತು.

## ೪. ಕಥೆ.

### ಅಬದ್ಧಿಕನಾದ ಹುಡುಗನನ್ನು ಕುರಿತದ್ದು.

ಒಂದು ಅಗ್ರಹಾರದಲ್ಲಿ ಒಬ್ಬ ಬ್ರಾಹ್ಮಣನು ಇದ್ದನು. ಅವನಿಗೆ ಒಬ್ಬ ಕುಮಾರನು ಇರುವನು; ಆ ಕುಮಾರನನ್ನು ಹಿಂದೆ ಕರೆದು ಕೊಂಡು, ಒಂದು ಊರಿಗೆ ಹೋಗುತ್ತಾ ಇದ್ದನು. ದಾರಿಯಲ್ಲಿ ಆ ಹುಡುಗನು, ಅಯ್ಯಾ, ಹುಲಿ ಬಂತು, ಎಂದು ಸುಮ್ಮನೆ ಕೂಗಿದನು. ಆಗ

ತಂದೆ ತಿರಿಗಿ, ನೋಡಿದನು; ಹುಲಿ ಇಲ್ಲ. ಮುಂದೆ ಸ್ವಲ್ಪ ದೂರ ಹೋಗಲಾಗಿ, ನಿಜವಾಗಿ ಹುಲಿ ಬಂದು, ಆ ಹುಡುಗನನ್ನು ಹಿಡು ಕೊಂಡಿತು. ಆಗ ಅವನು, ಹುಲಿ ಬಂತೆಂದು, ಕೂಗಿದನು. ಪೂರ್ವದ ಹಾಗೆಯೇ ಈಗ ಸುಮ್ಮನೆ ಕೂಗುತ್ತಾನೆಂದು, ಮನಸ್ಸಿನಲ್ಲಿ ಎಣಿಸಿ, ತಿರುಗದೆ, ಹೋದನು. ಆದದರಿಂದ ಅಬದ್ಧೀಕರ ಮಾತುಗಳನ್ನು ಯಾರೂ ನಂಬರು.

## ೫. ಕಥೆ.

ಇಬ್ಬರು ಹುಡುಗರನ್ನೂ ತೋಟಗಾರನನ್ನೂ ಕುರಿತದ್ದು.

ಒಂದು ದಿವಸ ಇಬ್ಬರು ಹುಡುಗರು ಒಂದು ತೋಟಕ್ಕೆ ಹೋದರು. ಅವರಲ್ಲಿ ಒಬ್ಬ ಹುಡುಗನು ಒಂದು ಗಿಡದ ಮೇಲೆ ಒಳ್ಳೇ ಹಣ್ಣನ್ನು ನೋಡಿ, ಅದನ್ನು ಕೊಯ್ಯುವದಕ್ಕೆ ಹೋದನು. ಆಗ ಎರಡನೆಯವನು, ಆ ಹಣ್ಣು ಕೊಯ್ಯ ಬೇಡ; ತೋಟದವನು ನೋಡಿದರೆ, ಹೊಡೆಯುವನೆಂದು, ಹೇಳಿದನು. ಅವನು ಅವನ ಮಾತನ್ನು ಕೇಳದೆ, ಗಿಡ ಹತ್ತಿ, ಹಣ್ಣುಗಳನ್ನು ಕೊಯಿದು ಕೊಂಡು ಬಂದನು. ಅಷ್ಟರಲ್ಲೇ ಆ ತೋಟದವನು ಬಂದು, ಈ ಹಣ್ಣುಗಳನ್ನು ಯಾತಕ್ಕೆ ಕೊಯಿದಿ? ಎಂದು ಹೇಳಿ, ಅವನನ್ನು ಹಿಡಿದು ಕೊಂಡನು. ಆ ಹುಡುಗನು, ಈ ಹಣ್ಣುಗಳನ್ನು ನಾನು ಕೊಯ್ಯಲಿಲ್ಲ; ಅವನು ಕೊಯಿದು, ನನ್ನ ಕೈಗೆ ಕೊಟ್ಟನೆಂದು, ತನಗೆ ಬುದ್ಧಿ ಹೇಳಿದ ಸ್ನೇಹಿತನನ್ನು ತೋರಿಸಿದನು. ಆ ತೋಟದವನು ಅವನನ್ನು ಹಿಡಿದು, ದಂಡಿಸಿದನು. ಅದು ಕಾರಣ ದುರ್ಮಾರ್ಗರ ಸಹವಾಸ ಮಾಡ ಬಾರದು.

## ೬. ಕಥೆ.

ಮನುಷ್ಯನನ್ನೂ ಚೇಳನ್ನೂ ಕುರಿತದ್ದು.

ಒಬ್ಬನು ಒಂದು ಚೇಳು ಬೆಂಕಿಯಲ್ಲಿ ಬೀಳುತ್ತಿರುವಾಗ, ನೋಡಿ, ಅದನ್ನು ಕಾಪಾಡಿದರೆ, ಪುಣ್ಯವು ಬರುವದೆಂದು ಯೋಚನೆ ಮಾಡಿ, ಬೀಳದ ಹಾಗೆ ಹಿಡಿದು ಕೊಂಡನು. ಅದು ಆ ಉಪಕಾರವನ್ನು ವಿಚಾರಿಸದೆ, ಅವನ ಕೈ ಕಚ್ಚಿತು; ಅದರಿಂದ ಅವನು ಬಹಳ ಶ್ರಮೆ ಪಟ್ಟನು. ಹೀಗೆ ದುಷ್ಟರು ಉಪಕಾರಕ್ಕೆ ಪ್ರತಿ ಅಪಕಾರ ಮಾಡುತ್ತಾರೆ.

## ೭. ಕಥೆ.

ಶೂದ್ರನನ್ನೂ ಅವನ ಕರೀ ನಾಯಿಯನ್ನೂ ಕುರಿತದ್ದು.

ಒಬ್ಬ ಶೂದ್ರನ ಬಳಿಯ ಒಂದು ಕರೀ ನಾಯಿ ಇತ್ತು. ಅವನು ಅದನ್ನು ಬೆಳ್ಳಗೆ ಮಾಡ ಬೇಕೆಂದು, ನದಿಗೆ ತೆಗೆದು ಕೊಂಡು ಹೋಗಿ, ಬಹಳ ದಿವಸಗಳ ಮಟ್ಟಿಗೂ ಉಜ್ಜುತ್ತಾ ಬಂದನು. ಎಷ್ಟು ಉಜ್ಜಿದಾಗ್ಯೂ ಅದು ಬೆಳ್ಳಗೆ ಆಗದೆ ಹೋಯಿತು. ಆದ್ದರಿಂದ ಅಸಾಧ್ಯವಾದ ಕೆಲಸ ಸಾಧಿಸ ಕೂಡದು.

## ೮. ಕಥೆ.

ನೀಚ ಅರಸನನ್ನೂ ಕವೀಶ್ವರನನ್ನೂ ಕುರಿತದ್ದು.

ಒಬ್ಬ ಕಳ್ಳನು ಒಂದು ಪಟ್ಟಣಕ್ಕೆ ಅರಸನು ಆದನು. ಆಗ ಆತನ ಸಮೀಪಕ್ಕೆ ಒಬ್ಬ ಕವೀಶ್ವರನು ಬಂದು, ಆತನ ಮೇಲೆ ಕೆಲವು ಪದ್ಯಗಳು ಹೇಳಿ, ತನಗೆ ಏನಾ

ದರೂ ಸಂಭಾವನೆ ಕೊಡಿಸೆಂದು ಕೇಳಿದನು. ಅಷ್ಟರಲ್ಲಿ ಆತನು ಸಮೀಪದಲ್ಲಿ ಇದ್ದವರನ್ನು ನೋಡಿ, ಆ ಕವೀಶ್ವರನ ಮೇಲೆ ಇರುವ ಬಟ್ಟೆಗಳಷ್ಟು ಕಿತ್ತು ಕೊಂಡು, ಕಳುಹಿಸಿರಿ, ಎಂದು ಆಜ್ಞಾಪಿಸಿದನು. ಅವರು ಆ ಪ್ರಕಾರವೇ ಆತನ ಬಟ್ಟೆಗಳೆಲ್ಲಾ ತೆಗೆದು ಕೊಂಡು, ಆತನನ್ನು ಹೊರಡಿಸಿದರು. ಹೀಗೆ ನೀಚರಿಗೆ ದೊಡ್ಡ ಅಧಿಕಾರ ಬಂದಾಗ್ಯೂ, ತಮ್ಮ ನೀಚ ಬುದ್ಧಿಯನ್ನು ಬಿಡರು.

## ೯. ಕಥೆ.

ಅರಸನನೂ ಬೇವಿನ ಬೀಜವನೂ ಕುರಿತದ್ದು.

ಒಬ್ಬ ಅರಸನು ಬೇವಿನ ಬೀಜವನ್ನು ತರಿಸಿ, ತನ್ನ ಅರಮನೆಯಲ್ಲಿ ಸಕ್ಕರೆಯಿಂದ ಪಾತಿಯನ್ನು ಮಾಡಿಸಿ, ಅದರಲ್ಲಿ ಆ ಬೀಜವು ಹಾಕಿ, ಅದು ಮೊಳೆದು, ದೊಡ್ಡದಾಗುವ ಮಟ್ಟಿಗೂ ಹಾಲು ಹಾಕಿ, ಸಾಕುತ್ತಾ ಇದ್ದನು. ಅದು ದೊಡ್ಡದಾದ ತರುವಾಯು, ಅದರಲ್ಲಿ ಹೂವುಗಳೂ ಹೀಚುಗಳೂ ಕಾಯಿಗಳೂ ತುಂಬಿ ಇತ್ತು. ಅದರ ಕಾಯಿಗಳು ಸಿಹಿಯಾಗಿರುವವೆಂದು ಮನಸ್ಸಿನಲ್ಲೆಣಿಸಿದಂಥವನಾಗಿ, ಒಂದು ಕಾಯಿಯನ್ನು ತರಿಸಿ, ಬಾಯಿಯಲ್ಲಿ ಹಾಕಿ ಕೊಂಡನು. ಅದು ಬಹಳ ಕಹಿಯಾಗಿ ಇತ್ತೇ ಹೊರ್ತು, ಸಿಹಿಯಾಗಿ ಇರಲಿಲ್ಲ. ಅದೇ ಪ್ರಕಾರ ದುರ್ಜನರು ಚಿಕ್ಕಂದಿನಿಂದ ಸಜ್ಜನರ ಸಹವಾಸ ಮಾಡಿದಾಗ್ಯೂ, ತಮ್ಮ ದುರ್ಗುಣವನ್ನು ಬಿಡರು.

## ೧೦. ಕಥೆ.

### ಕೋತಿಯನ್ನೂ ನೆರಳನ್ನೂ ಕುರಿತದ್ದು.

ಒಂದು ಕೋತಿಯು ಭಾವಿಯ ಬಳಿಯ ಕೂತು ಕೊಂಡು, ಮಾವಿನ ಹಣ್ಣು ತಿನ್ನುತ್ತಾ, ಇಣಿಕಿ, ಭಾವಿಯೊಳಗೆ ನೋಡಲಾಗಿ, ನೀರಿನಲ್ಲಿ ತನ್ನ ನೆರಳು ಕಾಣಿಸಿತು. ಅದನ್ನು ನೋಡಿ, ಒಳಗೆ ಮತ್ತೊಂದು ಕೋತಿ ಮಾವಿನ ಹಣ್ಣನ್ನು ತಿನ್ನುತ್ತಾ ಇದೆ; ಅದನ್ನು ಹೆದರಿಸಿ, ಆ ಹಣ್ಣನ್ನು ತೆಗೆದು ಕೊಳ್ಳ ಬೇಕೆಂದು ಯೋಚಿಸಿ, ಕೋಪದಿಂದ ಘಟ್ಟಿಯಾಗಿ ಕೂಗಿದ್ದರಿಂದ ಬಾಯಿಯಲ್ಲಿದ್ದ ಹಣ್ಣು ಭಾವಿಯೊಳಗೆ ಬಿದ್ದು, ಮುಣಿಗಿ ಹೋಯಿತು. ಆ ಬಳಿಕ ಕೋತಿ ಬಹು ವ್ಯಸನ ಪಟ್ಟಿತು. ಆದಕಾರಣ ಪರರ ಒಡವೆಗೆ ಆಶೆ ಪಟ್ಟರೆ, ತನ್ನ ಒಡವೆ ಹೋಗುವದು.

## ೧೧. ಕಥೆ.

### ಶೂದ್ರನನ್ನೂ ಅವನ ಎಮ್ಮೆಯನ್ನೂ ಕುರಿತದ್ದು.

ಒಬ್ಬ ಶೂದ್ರನ ಬದೀಲಿ ಒಂದು ಎಮ್ಮೆ ಇತ್ತು; ಅದು ನಿತ್ಯವೂ ಒಂದು ಶೇರು ಹಾಲು ಕೊಡುವದು. ಅವನು ಆ ಹಾಲನ್ನು ಎರಡು ದುಡ್ಡುಗಳಿಗೆ ಮಾರಿ ಕೊಂಡು, ಅದರಿಂದ ಜೀವನವನ್ನು ಮಾಡುತ್ತಾ ಇದ್ದನು. ಹೀಗೆ ಇರುವಾಗ, ಅವನು ಒಂದು ದಿನ ಯೋಚನೆ ಮಾಡಿದನು; ಏನಂದರೆ, ಈ ಎಮ್ಮೆ ಕೊಡುವ ಹಾಲು ಮಾರಿ ಕೊಂಡರೆ, ಎರಡು ದುಡ್ಡುಗಳು ದೊರಕುತ್ತವೆ ಅಲ್ಲವೇ? ಇದರಿಂದ ನಾನು ಭಾಗ್ಯವಂತನಾಗ ಹೋಗುವದಿಲ್ಲ;

ಆದಕಾರಣ ಇದರ ಕೆಚ್ಚಲನ್ನು ಕೊಯಿದು, ಒಳಗೆ ಇರುವ ಹಾಲು ಎಲ್ಲವು ಮಾರಿ ಕೊಂಡರೆ, ನನಗೆ ತುಂಬಾ ಭಾಗ್ಯ ಉಂಟಾಗುವದು. ಎಮ್ಮೆಯ ಕೆಚ್ಚಲನ್ನು ಕೊಯಿದು ನೋಡಲಾಗಿ, ಒಳಗೆ ರಕ್ತವೂ ಮಾಂಸವೇ ಹೊರ್ತು, ಇನ್ನೇನೂ ಇರಲಿಲ್ಲ. ಆ ಮೇಲೆ ತನ್ನನ್ನು ಕಾಪಾಡುತ್ತಾ ಇದ್ದ ಎಮ್ಮೆ ಸತ್ತು ಹೋಯಿತೆಂದು, ಬಹಳ ವಿಚಾರ ಪಟ್ಟನು. ಆದಕಾರಣ ಬಹಳ ಆಶೆ ಪಟ್ಟರೆ, ಮೊದಲಿಗೆ ಮೋಸ ಬರುವದು.

## ೧೨. ಕಥೆ.

ಹುಲಿಯನೂ ಅಡವಿಯ ಮೃಗಗಳನೂ ಕುರಿತದ್ದು.

ಒಂದು ಅರಣ್ಯದಲ್ಲಿ ಒಂದು ಹುಲಿ ಇತ್ತು. ಅದು ಅಲ್ಲಿನ ಮೃಗಗಳನ್ನು ಲಕ್ಷ್ಯಮಾಡದೆ, ನೋಡಿದ ಕಡೆ ಬಾಧಿಸುತ್ತಾ ಬರುವದು. ಹೀಗೆ ಇರಲಾಗಿ, ಒಂದು ದಿನ ಆ ಹುಲಿ ಒಂದು ಎತ್ತನ್ನು ನೋಡಿ, ಅದರ ಮೇಲಕ್ಕೆ ಹಾರಿತು. ಆಗ ದೈವಾಧೀನದಿಂದ ಗುರಿ ತಪ್ಪಿ, ಈಚೇ ಕಡೆಯಲ್ಲಿ ಅಗಾಧವಾದ ಹಳ್ಳದಲ್ಲಿ ಬಿತ್ತು. ಬಿದ್ದ ಹುಲಿಯನ್ನು ನೋಡಿ, ಮೃಗಗಳು ಎಲ್ಲಾ ಗುಂಪು ಕೂಡಿ, ಈ ಸಮಯದಲ್ಲಿ ಇದನ್ನು ಸಾಯ ಕೊಲ್ಲದಿದ್ದರೆ, ನಮ್ಮನ್ನು ತಿರಿಗಿ ಬಾಧಿಸುತ್ತಾ ಬರುವದು; ಆದಕಾರಣ ಈಗಲೇ ಇದನ್ನು ಸಂಹರಿಸ ಬೇಕೆಂದು, ಯೋಚನೆ ಮಾಡಿ, ಎಲ್ಲಾ ಒಂದೊಂದು ಕಲ್ಲುಗಳನ್ನೆತ್ತಿ, ಹುಲಿಯ ಮೇಲೆ ಹಾಕಿದವು. ಆ ಹಳ್ಳ ತುಂಬಿ, ಹುಲಿ ಅದರೊಳಗೆ ಮೃತವಾಯಿತು. ಆದಕಾರಣ ಎಷ್ಟು ಬಲವಂತನಾದಾಗ್ಯೂ, ಬಹು ಜನ ವಿರೋಧವು ಕೂಡದು.

೧೩. ಕಥೆ.

ಕಟ್ಟಿಗೆ ಮಾರುವವನನ್ನೂ ಮರಗಳನ್ನೂ ಕುರಿತದ್ದು.

ಒಬ್ಬ ಶೂದ್ರನು ಒಂದು ಕೊಡಲಿಯನ್ನು ಮಾಡಿಸಿ, ಅದಕ್ಕೆ ಒಳ್ಳೇ ಕಟ್ಟಿಗೆ ಸಂಪಾದಿಸಿ ಹಾಕ ಬೇಕೆಂದು ಯೋಚನೆ ಮಾಡಿ, ಅರಣ್ಯಕ್ಕೆ ಹೋಗಿ, ಅಲ್ಲಿ ಇರುವ ಮರಗಳಲ್ಲಿ ಯಾವದರ ರೆಂಬೆ ಚನ್ನಾಗಿ ಇರುವದೆಂದು, ನೋಡುತ್ತಾ ಇರುವಾಗ; ಒಂದು ಹುಣಿಸೆ ಮರ ಅವನನ್ನು ನೋಡಿ, ನಿನಗೆ ಏನು ಆಗ ಬೇಕೆಂದು ಕೇಳಿದ್ದರಿಂದ, ನನಗೆ ಕೈ ಉದ್ದ ಕಟ್ಟಿಗೆ ಶಿಕ್ಕಿದರೆ ಸಾಕು, ಎಂದು ಹೇಳಿದನು. ನಿನಗೆ ಬೇಕಾದದ್ದು ಇಷ್ಟೇನೋ? ಎಂದು ತನ್ನ ರೆಂಬೆಗಳಲ್ಲಿ ಅವನಿಗೆ ಬೇಕಾದಷ್ಟು ಕೊಟ್ಟಿತು. ಅವನು ಅದನ್ನು ಜೇವಿ, ತನ್ನ ಕೊಡಲಿಗೆ ಹಾಕಿಕೊಂಡು, ಆ ಹುಣಿಸೆ ಮರವನ್ನೂ ಇನ್ನು ಅರಣ್ಯದಲ್ಲಿ ಇರುವ ಮರಗಳನ್ನೂ ಹೊಡದು, ಮಾರಿ ಕೊಳ್ಳ ಉದ್ಯೋಗಿಸಿದನು. ಅದು ಕಾರಣ ಶತ್ರುಗಳಿಗೆ ಉಪಕಾರವನ್ನು ಮಾಡಿದರೆ, ಒಂದು ವೇಳೆ ಅಪಕಾರ ಬರುವದು.

೧೪. ಕಥೆ.

ಬೋಧಕನನ್ನೂ ವಿದ್ಯ ಕಲಿಯ ಬೇಕೆಂದು ಅಪೇಕ್ಷೆಯುಳ್ಳ ಹುಡುಗನನ್ನೂ ಕುರಿತದ್ದು.

ಕಾಂಚೀ ಪಟ್ಣದಲ್ಲಿ ಒಬ್ಬ ವಿದ್ವಾಂಸನು ಇದ್ದನು. ಅವನು ಬಹು ಮಂದಿ ಹುಡುಗರಿಗೆ ಓದು ಹೇಳುತ್ತಾ, ಅದರಿಂದ ಜೀವನವನ್ನು ಮಾಡುತ್ತಾ ಇದ್ದನು. ಒಂದು ದಿನ ಆತನ ಬಳಿಗೆ ಒಬ್ಬ ಹುಡುಗನು ಬಂದು, ಅಯ್ಯಾ,

ನನಗೆ ವಿದ್ಯವನ್ನು ಕಲಿಯ ಬೇಕೆಂಬ ಆಶೆ ಬಹಳ ಉಂಟು; ಆದಕಾರಣ ನೀವು ವಿದ್ಯವನ್ನು ಕಲಿಸ ಬೇಕೆಂದು, ಪ್ರಾರ್ಥಿಸಿದನು. ಆ ವಿದ್ವಾಂಸನು, ಆ ಬಾಲಕನ ಬುದ್ಧಿ ನೋಡೋಣಾ ಎಂದು, ಎಲೋ, ಹುಡುಗನೇ, ದೇವರು ಎಲ್ಲಿದ್ದಾನೆ? ಎಂದು ಕೇಳಿದನು. ಅದಕ್ಕೆ ಆ ಹುಡುಗನು, ದೇವರು ಇಲ್ಲದ ಸ್ಥಳವು ಮುಂಚಿತವಾಗಿ ತಾವು ಅಪ್ಪಣೆ ಕೊಟ್ಟರೆ, ಆ ಮೇಲೆ ನಾನು ಅರಿಕೆ ಮಾಡಿ ಕೊಳ್ಳುತ್ತೇನೆಂದು, ಹೇಳಿದನು. ಆ ವಿದ್ವಾಂಸನು ಹುಡುಗನ ಮಾತನ್ನು ಕೇಳಿ, ಇವನು ಬಹು ಬುದ್ಧಿವಂತನೆಂದು ಯೋಚನೆ ಮಾಡಿ, ಅವನು ಕೋರಿದ ಹಾಗೆ ಅವನಿಗೆ ಚನ್ನಾಗಿ ವಿದ್ಯವನ್ನು ಕಲಿಸಿದನು. ಆದಕಾರಣ ಬುದ್ಧಿವಂತರಾದವರಿಗೆ ಚಿಕ್ಕಂದಿನಿಂದಲೂ ಯುಕ್ತಿಗಳು ತೋಚುತ್ತಾ ಇರುವವು.

## ೧೫. ಕಥೆ.

ಅರಸನನ್ನೂ ಜೋಯಿಸನನ್ನೂ ಮಂತ್ರಿಯನ್ನೂ ಕುರಿತದ್ದು.

ಅಂಗ ದೇಶದಲ್ಲಿ ಒಬ್ಬ ರಾಯನು ಇದ್ದನು. ಆತನ ಬಳಿಗೆ ನಿತ್ಯವು ಒಬ್ಬ ಜೋಯಿಸನು ಬರುತ್ತಾ ಹೋಗುತ್ತಾ ಇದ್ದನು. ಹೀಗೆ ಇರುವಲ್ಲಿ, ಒಂದು ದಿನ ಆ ಅರಸು ಈ ಜೋಯಿಸನನ್ನು ನೋಡಿ, ನಾನು ಇನ್ನೆಷ್ಟು ದಿವಸ ಬದುಕುವೆನು? ಹೇಳೆಂದು, ಕೇಳಿದನು. ಅದಕ್ಕೆ ಆತನು, ಅಯ್ಯಾ, ತಾವು ಇನ್ನು ಎರಡು ಸಂವತ್ಸರಕ್ಕಿಂತ ಹೆಚ್ಚಾಗಿ ಬದುಕಲಾರಿರಿ ಎಂದು ಹೇಳಿದನು. ರಾಯನು ಈ ಮಾತು ಕೇಳಿ, ಬಹು ವ್ಯಸನಾಕ್ರಾಂತನಾಗಿ ಇದ್ದನು. ಆಗ ಮಂತ್ರಿ ಅಲ್ಲೇ ಇದ್ದದರಿಂದ, ಆತನು ಈ ಜೋಯಿ

ಸನನ್ನು ನೋಡಿ, ಅರಸಿನವರು ಇನ್ನು ಎರಡು ಸಂವತ್ಸರಕ್ಕಿಂತ ಹೆಚ್ಚಾಗಿ ಬದುಕಲಾರರೆಂದು ಹೇಳಿದೆಯಲ್ಲಾ? ನೀನು ಎಷ್ಟು ವರುಷಗಳು ಬದುಕುತ್ತೀ? ಹೇಳುವಿಯಾ? ಎಂದು ಕೇಳಿದನು. ಆತನು, ತಾನು ಇನ್ನು ಇಪ್ಪತ್ತು ವರುಷಗಳು ಬದುಕುತ್ತೇನೆಂದು ಹೇಳಿದನು. ಆಗ ಆ ಮಂತ್ರಿಯು ತನ್ನ ಕತ್ತಿ ಹಿರಿದು, ಒಂದೇ ದೆಬ್ಬೆಯಲ್ಲಿ ಆತನ ತಲೆಯನ್ನು ಛೇದಿಸಿ, ರಾಯನನ್ನು ನೋಡಿ, ಅಯ್ಯಾ, ಇವನ ಮಾತುಗಳು ನಂಬಿ, ಯಾತಕ್ಕೆ ಭಯ ಪಡುತ್ತೀರಿ? ತನ್ನ ಮರಣವು ತಾನೇ ತಿಳಿಯದವನು ಇತರರಿಗೆ ಏನು ಹೇಳುವನು? ಆದಕಾರಣ ತಾವು ಭಯ ಪಡ ಬೇಡಿರಿ, ಎಂದು ಧೈರ್ಯವನ್ನು ಹೇಳಿದನು. ರಾಯನು ಅವನ ಬುದ್ಧಿಗೆ ಸಂತೋಷಿಸಿ, ಆತನಿಗೆ ಬಹುಮಾನ ಸನ್ಮಾನಗಳನ್ನು ಮಾಡಿಸಿದನು. ಅದುಕಾರಣ ಜೋಯಿಸನ ಮಾತುಗಳನ್ನು ನಂಬ ಬಾರದು.

## ೧೯. ಕಥೆ.

ಬುದ್ಧಿವಂತನಾದ ಹುಡುಗನನ್ನೂ ಅವನ ಕೆಟ್ಟ ಜೊತೆಗಾರನನ್ನೂ ಕುರಿತದ್ದು.

ಒಂದು ಹಳ್ಳಿಯಲ್ಲಿ ಇಬ್ಬರು ಹುಡುಗರು ಇದ್ದರು. ಅವರಲ್ಲಿ ಒಬ್ಬನು ಬುದ್ಧಿವಂತನು, ಮತ್ತೊಬ್ಬನು ಅವಿವೇಕನು. ಈ ಇಬ್ಬರು ಒಂದು ದಿವಸ ಒಂದು ತೋಟಕ್ಕೆ ಹೋಗಲಾಗಿ, ಅಲ್ಲಿ ಒಂದು ತೆಂಗಿನ ಕಾಯಿ ಶಿಕ್ಕಿತು. ಆ ಬುದ್ಧಿವಂತನಾದವನು ಆ ಕಾಯಿ ಒಡದು, ಒಳಗೆ ಇದ್ದದ್ದು ಎಲ್ಲಾ ತಾನೇ ತಿಂದು, ದೊಡ್ಡ ಚಿಪ್ಪುಗಳನ್ನು ಆ ಅವಿವೇಕಿಗೆ ಕೊಟ್ಟನು. ಅವನು ಆ ಚಿಪ್ಪು

ಗಳನ್ನು ತುಂಡುಗಳು ಮಾಡಿ, ಬಾಯಿಯೊಳಗೆ ಹಾಕಿ ಕೊಂಡಾಗ, ಕಲ್ಲುಗಳ ಹಾಗೆ ಘಟ್ಟಿಯಾಗಿದ್ದವು. ಆದ ಕಾರಣ, ತನ್ನ ಸ್ನೇಹಿತನು ತನ್ನನ್ನು ಮೋಸಾ ಮಾಡಿದ ನಲ್ಲವೇ? ಇನ್ನು ಯಾವಾಗಲಾದರೂ ನಾನು ಅವನು ಮಾಡಿದ ಹಾಗೆ ಮಾಡ ಬೇಕೆಂದು, ಯೋಚನೆ ಮಾಡಿದ ನು. ಕೆಲವು ದಿವಸಗಳಾದ ಮೇಲೆ, ಅವರಿಬ್ಬರಿಗೆ ಒಂದು ಮಾವಿನ ಹಣ್ಣು ಶಿಕ್ಕಿತು. ಆಗ ಆ ಅವಿವೇಕಿ, ಅವನು ಮಾಡಿದ ಮಾಟಕ್ಕೆ ಪ್ರತಿಯಾಗಿ ಮಾಡ ಬೇಕೆಂದು, ಆ ಬುದ್ಧಿವಂತನಾದ ಹುಡುಗನನ್ನು ನೋಡಿ, ತನಗೆ ಒಳಗಿನದು ಕೊಟ್ಟು, ಮೇಲಿನದು ನೀನು ತಿನ್ನು, ಎಂದು ಹೇಳಿದನು. ಅವನು ಬಹು ಸಂತೋಷವನ್ನು ಹೊಂದಿ, ಮೇಲೆ ಇರುವದೆಲ್ಲಾ ತಾನೇ ತಿಂದು, ಅವನಿಗೆ ಒಳಗೆ ಇರುವ ವಾಟೆಯನ್ನು ಕೊಟ್ಟನು. ಈ ಪ್ರಕಾರ ಬುದ್ಧಿಹೀನರಾದವರು ಮೋಸ ಹೋಗುವರು.

## ೧೭. ಕಥೆ.

ಅಗಸನನ್ನೂ ಅವನ ಕತ್ತೆಯನ್ನೂ ಕುರಿತದ್ದು.

ಹಸ್ತಿನಾಪುರದಲ್ಲಿ ವಿಲಾಸನೆಂಬ ಅಗಸನ ಬಳೀಲಿ ಒಂದು ಕತ್ತೆ ಇತ್ತು. ಅದು ಮೊಟ್ಟೆಗಳು ಹೊತ್ತು, ಹೊತ್ತು, ಬಲಹೀನವಾಗಿ, ಏಳುವದಕ್ಕೆ ತ್ರಾಣೆ ಇಲ್ಲದೆ ಬಿದ್ದು ಇತ್ತು. ಆಗ ಅಗಸನು ಅದರ ಮೇಲೆ ಹುಲಿ ತೊಗಲನ್ನು ಹೊದಿಸಿ, ಅದನ್ನು ಹೊಲದ ಒಳಕ್ಕೆ ಹೊಡೆದನು. ಅಲ್ಲಿ ಇರುವವರೆಲ್ಲರು ಆ ಕತ್ತೆಯನ್ನು ನೋಡಿ, ಹುಲಿ ಎಂದು ಭಯ ಪಟ್ಟು, ಓಡಿ ಹೋದರು. ಆ ಮೇಲೆ ಸ್ವಲ್ಪ ಹೊತ್ತಿಗೆ ಆ ಹೊಲ ಕಾಯುವವನು ಇದರ ನಡತೆಗಳ

ನ್ನು ನೋಡಿ, ಇದು ಹುಲಿಯಾಗಿ ಕಾಣಿಸಲಿಲ್ಲ; ಆದರೂ ಪರಿಕ್ಷೆ ಮಾಡ ಬೇಕೆಂದು, ಕತ್ತೆಯ ತೊಗಲನ್ನು ಹೊದ್ದು ಕೊಂಡು, ಅಲ್ಲಿಗೆ ಬಂದನು. ಈ ಕತ್ತೆ ಅವನನ್ನು ನೋಡಿ, ಹೆಣ್ಣು ಕತ್ತೆ ಎಂದು, ಅವನ ಬಳಿಗೆ ಕೂಗುತ್ತಾ, ಓಡಿ ಬಂತು. ಆ ಕಾವಲನು ಅದರ ಶಬ್ದವನ್ನು ಕೇಳಿ, ಕತ್ತೆ ಎಂದು ತಿಳಿದು, ದೊಣ್ಣೆಯಿಂದ ಅದನ್ನು ಕೊಂದು, ಕೆಡಹಿದನು. ಹೀಗೆ ಅವಿವೇಕಿಗಳು ತಮಗೆ ತಾವೇ ಕೆಟ್ಟು ಹೋಗುವರು.

## ೧೮. ಕಥೆ.

### ಬೆಕ್ಕನ್ನೂ ನರಿಯನ್ನೂ ಕುರಿತದ್ದು.

ಒಂದು ದಿನ ಬೆಕ್ಕೂ ನರಿಯೂ ಎರಡೂ ಒಂದು ಸ್ಥಳದಲ್ಲಿ ಕೂಡಿ ಕೊಂಡು, ಮಾತನಾಡುತ್ತಾ ಇರಲಾಗಿ, ನರಿಯು ಬೆಕ್ಕನ್ನು ನೋಡಿ, ಎಲೇ ಬೆಕ್ಕೇ, ನಿನಗೆ ಏನಾದರೂ ಆಪತ್ತು ಬಂದರೆ, ಅದನ್ನು ತಪ್ಪಿಸಿ ಕೊಂಬುವದಕ್ಕೆ ಎಷ್ಟು ಉಪಾಯಗಳು ಕಲಿತು ಇದ್ದೀ? ಎಂದು ಕೇಳಿತು. ಅದಕ್ಕೆ ಬೆಕ್ಕು, ತನಗೆ ಒಂದೇ ಉಪಾಯ ತಿಳಿಯುವದು; ಬರುವ ಆಪತ್ತುಗಳನ್ನೆಲ್ಲಾ ಆ ಒಂದೇ ಉಪಾಯದಿಂದ ತಪ್ಪಿಸಿ ಕೊಳ್ಳುತ್ತೇನೆಂದು, ಹೇಳಲಾಗಿ; ನರಿಯು ನಕ್ಕು, ನಿನಗೆ ಇಷ್ಟೇನೇ ತಿಳಿಯುವದು? ನನಗೆ ತಿಳಿದಷ್ಟು ಉಪಾಯಗಳು ನಿನಗೆ ತಿಳಿಯದೆಂದು, ಅಪಹಾಸ್ಯ ಮಾಡಿತು. ಹೀಗೆ ಇರುವಾಗ, ಎಲ್ಲಿಂದಲೋ ಬೇಟೇ ನಾಯಿಗಳು ಆ ಮಾರ್ಗವಾಗಿ ಬಂದವು. ಆ ನಾಯಿಗಳನ್ನು ನೋಡಿ, ಬೆಕ್ಕು ಅಲ್ಲಿ ಒಂದು ಗಿಡ ಇರಲಾಗಿ, ಅದರ ಮೇಲೆ ಹತ್ತಿತು. ನರಿ ಗಿಡವನ್ನು ಹತ್ತಲಾರ

ದೆ, ಬೇರೆ ಉಪಾಯುಗಳನ್ನು ತಿಳಿಯದೆ, ಆ ನಾಯಿಗಳ ಮಧ್ಯದಲ್ಲಿ ಶಿಕ್ಕು ಬಿದ್ದು, ಸತ್ತು ಹೋಯಿತು. ಆದಕಾರಣ ಒಂದು ವಿದ್ಯವಾದರೂ ಚನ್ನಾಗಿ ಕಲಿತವನು ಸುಖ ಪಡುವನು.

## ೧೯. ಕಥೆ.

### ಹುಡುಗನನ್ನೂ ಕಳ್ಳನನ್ನೂ ಕುರಿತದ್ದು.

ಒಬ್ಬ ಹುಡುಗನು ಭಾವಿಯ ಬಳಿಯ ಕೂತು ಕೊಂಡು, ಘಟ್ಟಿಯಾಗಿ ಅಳುತ್ತಾ ಇದ್ದನು. ಆಗ ಅಲ್ಲಿಗೆ ಒಬ್ಬ ಕಳ್ಳನು ಬಂದನು. ಆ ಹುಡುಗನನ್ನು ನೋಡಿ, ಎಲೋ, ನೀನು ಯಾಕೆ ಅಳುತ್ತೀ? ಎಂದು ಕೇಳಿದನು. ನಾನು ಇಲ್ಲಿ ಆಡಿ ಕೊಳ್ಳುತ್ತಾ ಇದ್ದು, ಈ ಭಾವಿಯಲ್ಲಿ ತೊಂಗಿ ನೋಡಲಾಗಿ, ನನ್ನ ಕಂಠದಲ್ಲಿ ಇದ್ದ ಮುತ್ತುಗಳ ಹಾರವು ಜಾರಿ, ನೀರಿನಲ್ಲಿ ಬಿದ್ದು ಹೋಯಿತು; ನಾನು ಹಾರವನ್ನು ಕಳಕೊಂಡು ಮನೆಗೆ ಹೋದರೆ, ನನ್ನ ತಂದೆ ತಾಯಿಗಳು ಹೊಡೆಯುವರು; ಆದಕಾರಣ ಅಳುತ್ತಾ ಇದ್ದೇನೆಂದು, ಹುಡುಗನು ಹೇಳಲಾಗಿ; ಕಳ್ಳನು ಅದನ್ನು ತಾನು ಕದ್ದು ಕೊಂಡು ಹೋಗ ಬೇಕೆಂದು ಯೋಚನೆ ಮಾಡಿ, ಎಲೋ, ನೀನು ಭಯ ಪಡ ಬೇಡ; ನಾನು ಇದರಲ್ಲಿ ಇಳಿದು, ನಿನ್ನ ಮುತ್ತಿನ ಹಾರವು ಕೊಡುತ್ತೇನೆ; ನನ್ನ ಬಟ್ಟೆಗಳನ್ನು ಭದ್ರವಾಗಿ ನೋಡಿ ಕೊಂಡು, ಇರು ಎಂದು ಹೇಳಿ, ತನ್ನ ಬಟ್ಟೆಗಳೆಲ್ಲಾ ಮೇಲೆ ಇಟ್ಟು, ನಿರ್ವಾಣವಾಗಿ ಭಾವಿಯಲ್ಲಿ ಧುಮಿಕಿದನು. ಅವನು ಧುಮಿಕಿದ ಮೇಲೆ, ಹುಡುಗನು ಅವನ ಬಟ್ಟೆಗಳನ್ನು ತೆಗೆದು ಕೊಂಡು, ಓಡಿ ಹೋದನು. ಆ ಮೇಲೆ ಕಳ್ಳನು ಬ

ಹಳ ಹೊತ್ತು ಭಾವಿಯಲ್ಲಿ ಹಾರವನ್ನು ಹುಡುಕಿದರೂ, ಶಿಕ್ಕಲಿಲ್ಲ. ಆದಕಾರಣ ಮೇಲಕ್ಕೆ ಬಂದು, ನೋಡಲಾಗಿ, ಆ ಬಾಲಕನು ಕಾಣಿಸಲಿಲ್ಲ. ಆದಕಾರಣ ಆ ಕಳ್ಳನು–ತಾನೇ ವಂಚಕನೆಂದು ಇದ್ದರೂ, ನನ್ನನ್ನು ಒಬ್ಬ ಬಾಲಕನು ವಂಚನೆ ಮಾಡಿದನೆಂದು, ಆಶ್ಚರ್ಯ ಪಡುತ್ತಾ ಹೋದನು. ಆದಕಾರಣ ತಾನು ಎಷ್ಟು ಘಟ್ಟಿಗನು ಆದಾಗ್ಯೂ, ತನಗೆ ಮಿಂಚಿದವನು ಒಬ್ಬನು ಉಂಟು.

## ೨೦. ಕಥೆ.

### ಹುಲಿಯನ್ನೂ ಕಾಗಿಯನ್ನೂ ಕುರಿತದ್ದು.

ಒಂದು ಅರಣ್ಯದಲ್ಲಿ ಹುಲಿಯು ಮೃಗಗಳನ್ನು ಹಿಡಿದು, ಭಕ್ಷಿಸುತ್ತಾ ಇರುವದು. ಒಂದು ದಿನ ಕಾಡೆಮ್ಮೆಯನ್ನು ಹಿಡಿದು, ತಿನ್ನಲಾಗಿ, ಅದರ ಎಲುಬು ಹಲ್ಲುಗಳ ಸಂದಿನಲ್ಲಿ ಚುಚ್ಚಿಕೊಂಡು, ಕೆಳಕ್ಕೆ ಬೀಳದೆ, ರಕ್ತವೂ ಕೀವೂ ಕೂಡಿ, ತುಂಬಾ ನೋವು ಮಾಡಿತು. ಆಗ ಆ ಹುಲಿ ನೋವಿನಿಂದ ಒಂದು ಗಿಡದ ಕೆಳಗೆ ಬಾಯಿ ತೆರದು ಕೊಂಡು, ಈ ಎಲುಬು ಹ್ಯಾಗೆ ಈಚೆಗೆ ಬರುವದು? ನಾನು ಹ್ಯಾಗೆ ಬದುಕುವೆನು? ಏನು ಮಾಡಲಿ? ಎಂದು ಬಹು ದುಃಖವನ್ನು ಹೊಂದುತ್ತಾ, ಆ ಗಿಡದ ಮೇಲೆ ಒಂದು ಕಾಗಿಯನ್ನು ನೋಡಿ, ಓ ಕಾಗಿಯೇ, ನಾನು ಈ ಪ್ರಕಾರ ಪ್ರಯಾಸ ಪಡುತ್ತಾ ಇದ್ದೇನೆ; ನನ್ನ ಬಾಯಿಯಲ್ಲಿ ಇರುವ ಎಲುಬನ್ನು ತೆಗೆದು, ನನ್ನನ್ನು ಬದುಕಿಸಿದರೆ, ನಿತ್ಯವೂ ನಾನು ತರುವ ಮಾಂಸದಲ್ಲಿ ನಿನಗೆ ಬೇಕಾದಷ್ಟು ಕೊಡುತ್ತೇನೆ; ಇಷ್ಟು ಮಾತ್ರ ಉಪಕಾರ ಮಾಡ ಬೇಕೆಂದು ಪ್ರಾರ್ಥಿಸಲಾಗಿ, ಆ ವಾಯುಸಕ್ಕೆ

ದಯ ಹುಟ್ಟಿ, ಹುಲಿಯ ಬಾಯಿಯಲ್ಲಿ ಪ್ರವೇಶಿಸಿ, ಆ ಎಲುಬನ್ನು ತೆಗೆದು, ಹುಲಿಯನ್ನು ನೋಡಿ, ಓ ಹುಲಿಯೇ, ನಿನಗೆ ಮಾಂಸವು ಕೊಡುತ್ತೇನೆಂದು, ಎನ್ನೊಡನೆ ಹೇಳಿದೆಯಲ್ಲಾ? ಕೊಡು, ಅನ್ನಲಾಗಿ; ಆ ಹುಲಿಯು ಅದನ್ನು ನೋಡಿ, ನೀನು ಬಾಯಿಯಲ್ಲಿ ಪ್ರವೇಶಿಸಿದಾಗ, ನಿನ್ನನ್ನು ತಿಂದು ಹಾಕದೆ, ಪ್ರಾಣದಿಂದ ಬಿಟ್ಟೆನಲ್ಲಾ; ಅದಕ್ಕೆ ಸಂತೋಷ ಪಡದೆ, ಇನ್ನು ಬೇರೆ ಮಾಂಸವು ಬೇಕೆಂದು ಹೇಳುತ್ತೀಯಾ? ಇನ್ನು ಇಲ್ಲಿ ನಿಲ್ಲದೆ, ಓಡಿ ಹೋಗು, ಎಂದು ಹೇಳಿತು. ಆದಕಾರಣ ಜನರು, ತಮಗೆ ಕಷ್ಟ ಕಾಲದಲ್ಲಿ ಉಪಕಾರ ಮಾಡಿದ ಸ್ನೇಹಿತರನ್ನು ಭಾಗ್ಯ ಬಂದಾಗ, ಮರೆತು ಹೋಗುತ್ತಾರೆ.

## ೨೧. ಕಥೆ.

ಇಂಗ್ಲಿಷ್ ಧೊರೆಯನೂ್ನ ಅವನ ದ್ವಿಭಾಷಿಯನೂ್ನ ಕುರಿತದ್ದು.

ಚನ್ನಪಟ್ಟಣದಲ್ಲಿ ಒಬ್ಬ ಇಂಗ್ಲಿಷ್ ಧೊರೆ ಇದ್ದನು. ಆತನಿಗೆ ಇಂಗ್ಲಿಷ್ ಭಾಷೆ ವಿನಾಯಿಸಿ, ಇತರ ಭಾಷೆಗಳು ತಿಳಿಯವು. ಆದಕಾರಣ ಸಕಲ ಭಾಷೆಗಳನ್ನು ತಿಳಿದ ಒಬ್ಬ ದ್ವಿಭಾಷಿಯನ್ನು ತನ್ನ ಬದೀಲಿ ಇಟ್ಟು ಕೊಂಡು ಇದ್ದನು. ಒಂದು ದಿನ ಆ ಧೊರೆಯ ಬಳಿಗೆ ದೊಂಬರರು ಬಂದು, ಗಡೆ ಕಟ್ಟಿ, ಆಡಿ, ತಮ್ಮ ವಿದ್ಯ ಸಾಮರ್ಥ್ಯವೆಲ್ಲಾ ತೋರಿಸಿದರು. ಆ ಮೇಲೆ ಆತನು ಶಾನೆ ಸಂತೋಷ ಪಟ್ಟು, ತನ್ನ ದ್ವಿಭಾಷಿಯನ್ನು ಕರೆದು, ಆ ದೊಂಬರರಿಗೆ ಹತ್ತು ವರಹಾ ಕೊಡು, ಎಂದು ಹೇಳಿದನು. ಅವನು ಅವರನ್ನ ತನ್ನ ಮನೆಗೆ ಕರೆದು ಕೊಂಡು ಹೋಗಿ, ಒಂದು ವರಹಾ ಕೊಟ್ಟು, ಹೋಗೆಂದು ಹೇಳಿದನು. ತಾ

ವು ಅಷ್ಟು ಕಷ್ಟ ಪಟ್ಟು, ಆಡಿದ್ದಕ್ಕೆ ಇಷ್ಟೇನೋ ಕೊಟ್ಟನೆಂದು, ಬಹು ವ್ಯಸನ ಪಟ್ಟು, ದ್ವಿಭಾಷಿ ತಮ್ಮನ್ನು ಮೋಸಾ ಮಾಡಿದನೋ, ಏನೋ, ಎಂದು ಅಂದು ಕೊಂಡು, ಅವರು ಆ ಧೊರೆಯ ಬಳಿಗೆ ಹೋಗಿ, ಆತನಿಗೆ ಆ ವರಹಾ ತೋರಿಸಿ, ದ್ವಿಭಾಷಿ ಇದು ಕೊಟ್ಟನೆಂದು, ಹೇಳಿ ಕೊಂಡರು. ಆ ಧೊರೆಗೆ ಅವರ ಭಾಷೆ ತಿಳಿಯದ ಕಾರಣ, ತನ್ನ ದ್ವಿಭಾಷಿಯನ್ನು ಕರಿಸಿ, ಅವರು ಏನು ಹೇಳುತ್ತಾರೆ? ಕೇಳು, ಅನ್ನಲಾಗಿ; ಅವನು ಧೊರೆಯನ್ನು ನೋಡಿ, ಅಯ್ಯಾ, ತಾವು ಕೊಟ್ಟ ಹತ್ತು ವರಹಾಗಳಲ್ಲಿ ಇದು ಭಾರಿ ಮುದ್ರೆಯ ವರಹಾ ಅನ್ನುತ್ತಾರೆ; ಇದನ್ನು ತೆಗೆದು ಕೊಂಡು, ಬೇರೆ ಕೊಡಿರಿ ಎಂದು ಕೇಳುತ್ತಾರೆ, ಎಂದು ಹೇಳಿದನು. ಅದಕ್ಕೆ ಆತನು ಕೋಪಿಸಿ, ಅವರನ್ನು ಹೊಡಿಸಿ, ಕಳುಹಿಸಿದನು. ಆದಕಾರಣ ತಾವು ವಾಸವಾಗಿರುವ ದೇಶದ ಬಾಷೆಯನ್ನು ಕಲಿಯದವರು ಇತರರು ಹೇಳಿದ ಮಾತುಗಳನ್ನು ನಂಬಿ, ಅನ್ಯಾಯ ಮಾಡುವರು.

## ೨೨. ಕಥೆ.

ಶೂದ್ರನನ್ನೂ ಅವನ ಕೋತಿಯನ್ನೂ ಮೇಕೆಯನ್ನೂ ಕುರಿತದ್ದು.

ಒಂದು ಹಳ್ಳಿಯಲ್ಲಿ ಒಬ್ಬ ಶೂದ್ರನು ಇದ್ದನು. ಅವನು ಒಂದು ಕೋತಿಯನ್ನೂ ಒಂದು ಮೇಕೆಯನ್ನೂ ಸಾಕುತ್ತಾ ಇದ್ದನು. ಹೀಗೆ ಇರುವಾಗ, ಅವನಿಗೆ ಇನ್ನೊಂದು ಊರಿಗೆ ಹೋಗ ಬೇಕಾದ ಕೆಲಸ ಬಂತು. ಆದಕಾರಣ ಮೊಸರು ಅನ್ನ ಬುತ್ತಿ ಮಾಡಿಸಿ, ಮೂಟೆ

ಕಟ್ಟಿ ಮೇಕೆಯನ್ನೂ ಕೋತಿಯನ್ನೂ ಕೂಡಾ ಕರೆದು ಕೊಂಡು ಹೋಗುತ್ತಾ, ದಾರಿಯಲ್ಲಿ ಒಂದು ಕೊಳ ಇರಲು, ಅಲ್ಲಿ ನಿಂತು, ಮೇಕೆಯನ್ನೂ ಕೋತಿಯನ್ನೂ ಕೊಳದ ಬಳಿಯ ಒಂದು ಗಿಡಕ್ಕೆ ಕಟ್ಟಿ ಹಾಕಿ, ಅವುಗಳ ಬದೀಲಿ ಅನ್ನದ ಮೂಟೆಯನ್ನು ಇರಿಸಿ, ತಾನು ಆ ಭಾವಿಯಲ್ಲಿ ಇಳಿದು, ಹಲ್ಲುಗಳನ್ನು ಉಜ್ಜಿ ಕೊಂಡು, ತಿರಿಗಿ ಮೇಲಕ್ಕೆ ಬರುವ ಒಳಗಾಗಿ, ಆ ಕೋತಿ ಮೊಸರೂ ಅನ್ನವೂ ಎಲ್ಲಾ ತಿಂದು, ತನ್ನ ಕೈಗಳಿಗೆ ಹತ್ತಿ ಕೊಂಡು ಇದ್ದ ಮೊಸರನ್ನು ಮೇಕೆಯ ಬಾಯಿಗೆ ಒರಿಸಿ, ತಾನು ಏನೂ ತಿಳಿಯದ ಹಾಗೆ ದೂರವಾಗಿ ಕೂತು ಕೊಂಡು ಇತ್ತು. ಆ ಶೂದ್ರನು ಬಂದು, ನೋಡಲಾಗಿ, ತಾನು ಇರಿಸಿ ಹೋದ ಅನ್ನದಲ್ಲಿ ಒಂದು ಅಗಳು ಆದರೂ ಇರಲಿಲ್ಲ; ಮೇಕೆಯ ಬಾಯಿಗೆ ಮಾತ್ರ ಮೊಸರು ಹತ್ತಿ ಕೊಂಡು ಇತ್ತು. ಆದಕಾರಣ ತಾನು ತಿನ್ನ ಬೇಕೆಂದು ಇಟ್ಟಿದ್ದ ಅನ್ನವೆಲ್ಲಾ ಈ ಮೇಕೆ ತಿಂದು ಹಾಕಿತಲ್ಲಾ ಎಂದು, ಬಹು ಕೋಪದಿಂದ ಆ ಮೇಕೆಯನ್ನು ಹೊಡೆದನು. ಆದಕಾರಣ ಅವಿವೇಕಿಗಳಾದ ಪ್ರಭುಗಳು ನ್ಯಾಯ ಅನ್ಯಾಯಗಳನ್ನು ವಿಚಾರಿಸರು.

## ೨೩. ಕಥೆ.

### ತುರುಕನನ್ನೂ ನ್ಯಾಯಾಧಿಪತಿಯನ್ನೂ ಕುರಿತದ್ದು.

ಪೂರ್ವ ಕಾಲದಲ್ಲಿ ಮುಛಲೀ ಪಟ್ಟಣದಲ್ಲಿ ಒಬ್ಬ ತುರುಕನು ಇದ್ದನು. ಒಂದು ದಿನ ರಾತ್ರಿ ಅವನ ಮನೆಯಲ್ಲಿ ಕಳ್ಳರು ಪ್ರವೇಶಿಸಿ, ಸಮಸ್ತವನ್ನು ಕದ್ದು ಕೊಂಡು ಹೋದರು. ಆ ಮೇಲೆ ಅವನು ಕಳ್ಳರನ್ನು ಶಾನೆ ಹು

ಡುಕಲಾಗಿ, ತನ್ನ ಮನೆಯಲ್ಲಿ ಹೋದ ಸಾಮಾನುಗಳಲ್ಲಿ ಕೆಲವು ಒಬ್ಬನ ಬದೀಲಿ ಇದ್ದ ಹಾಗೆ ಜಾಡೆ ಶಿಕ್ಕಿದ್ದರಿಂದ, ಇನ್ನು ಕೆಲವು ಕಾರಣಗಳು ವಿಚಾರಿಸಲಾಗಿ, ಅವನೇ ಕಳ್ಳತನ ಮಾಡಿದ ಹಾಗೆ ಕಾಣಿಸಲ್ಪಟ್ಟದ್ದರಿಂದ ಸಹಾ, ಅವನ್ನ ಹಿಡಿದು ಕೊಂಡು, ನ್ಯಾಯಾಧಿಪತಿಯ ಬಳಿಗೆ ಕರೆದು ಕೊಂಡು ಹೋದನು. ಆಗ ಆ ನ್ಯಾಯಾಧಿಪತಿಯು ಆ ತುರುಕನನ್ನು ನೋಡಿ, ಇವನು ನಿನ್ನ ಮನೆಯಲ್ಲಿ ಕದ್ದದ್ದಕ್ಕೆ ರುಜುವು ಮಾಡುವದಕ್ಕೆ ಯಾರಾದರು ಸಾಕ್ಷಿ ಇದ್ದಾರೋ? ಎಂದು ಕೇಳಿದನು. ತುರುಕನು, ಸಾಕ್ಷಿ ಇಲ್ಲಾ, ಎಂದು ಹೇಳಿದನು. ಸಾಕ್ಷಿ ಇಲ್ಲದಂಥಾ ವ್ಯಾಜ್ಯ ವಿಚಾರಿಸ ಕೂಡದು, ಎಂದು ಧರ್ಮಶಾಸ್ತ್ರದಲ್ಲಿ ಹೇಳಿ ಇಧೆ; ಆದಕಾರಣ ಈ ವ್ಯಾಜ್ಯ ವಿಚಾರಿಸುವದಿಲ್ಲವೆಂದು, ನ್ಯಾಯಾಧಿಪತಿ ಹೇಳಿದನು. ಬಳಿಕ ಆ ತುರುಕನು ಈ ಮಾತುಗಳು ಕೇಳಿ, ತನ್ನ ಕಾಲಿನ ಜೋಡು ತೆಗೆದು ಕೊಂಡು, ಆ ಕಳ್ಳನನ್ನು ಹೊಡೆದನು. ಅದಕ್ಕೆ ನ್ಯಾಯಾಧಿಪತಿ ಶಾನೆ ಕೋಪಾ ಮಾಡಿ, ನೀನು ಅವನನ್ನು ಯಾಕೆ ಹೊಡಿಯುತ್ತೀ? ಎಂದು ತುರುಕನನ್ನು ಕೇಳಲಾಗಿ; ಆತನು ನ್ಯಾಯಾಧಿಪತಿಯನ್ನು ನೋಡಿ, ಅಯ್ಯಾ, ಇವನು ನನ್ನ ಮನೆಗೆ ಕದಿಯುವದಕ್ಕೆ ಬರುವಾಗಲೇ, ತಾನು ಬರುತ್ತೇನೆಂದು, ನನ್ನ ಸಂಗಡ ಹೇಳಿ ಇದ್ದರೆ, ನಾನು ಇವನ ಕಳ್ಳತನ ರುಜುವು ಮಾಡುವದಕ್ಕೆ ಸಾಕ್ಷಿಗಳನ್ನು ಸಂಪಾದಿಸಿ ಕೊಂಡು ಇರುವೆನು; ಹಾಗೆ ತಿಳಿಸಲಿಲ್ಲ; ಆದಕಾರಣ ಯಾಕೆ ತಿಳಿಸಲಿಲ್ಲ ಎಂದು ಹೊಡಿಯುತ್ತೇನೆಂದು ಹೇಳಿದನು. ಆ ಮೇಲೆ ನ್ಯಾಯಾಧಿಪತಿ ನಾಚಿಕೆ ಪಟ್ಟು, ಸುಮ್ಮನೆ ಇದ್ದನು.

## ೨೪. ಕಥೆ.

ಶೂದ್ರನ ಹೆಂಡತಿಯನ್ನೂ ಮುಂಗಿಸಿಯನ್ನೂ ಕುರಿತದ್ದು.

ಪಲ್ನಾಟಿ ಶೀಮೆಯಲ್ಲಿ ಒಬ್ಬ ಶೂದ್ರನು ಇದ್ದನು. ಅವನ ಬದೀಲಿ ಒಂದು ಮುಂಗಿಸಿ ಇತ್ತು. ಅವನು ಅದನ್ನು ಬಹು ಜಾಗ್ರತೆಯಾಗಿ ಸಾಕುತ್ತಾ ಇರುವನು. ಅವನಿಗೆ ಮತ್ತೊಂದು ಊರಿಗೆ ಹೋಗ ಬೇಕಾದ ಕೆಲಸ ಬಂದದರಿಂದ, ಆ ಮುಂಗಿಸಿಯನ್ನು ತನ್ನ ಹೆಂಡತಿಗೆ ಒಪ್ಪಿಸಿ, ಹೋದನು. ಮಾರಣೆ ದಿನ ಅವಳು ತನ್ನ ಮಗುವನ್ನು ತೊಟ್ಲಸಲ್ಲಿ ಮಲಗಿಸಿ, ಆ ಮುಂಗಿಸಿಯನ್ನು ತೊಟ್ಲನ ಬಳಿಯಲ್ಲಿ ಇಟ್ಟು, ಕೆರೆಗೆ ನೀರಿಗೆ ಹೋದಳು. ಅಷ್ಟರಲ್ಲೇ ಮಗುವು ಇದ್ದ ತೊಟ್ಲಿನ ಸಮೀಪಕ್ಕೆ ಒಂದು ಹಾವು ಬಂತು. ಆ ಮುಂಗಿಸಿ ಹಾವನ್ನು ಹಿಡಿದು, ತುಂಡು ತುಂಡಾಗಿ ಕತ್ತರಿಸಿ, ಈ ವಿವರವು ಅವಳಿಗೆ ತಿಳಿಸಬೇಕೆಂದು, ರಕ್ತದ ಬಾಯಿಯಿಂದ ಆ ಹೆಂಗಸಿಗೆ ಎದುರಾಗಿ ಹೋಯಿತು. ಅವಳು ಮುಂಗಿಸಿ ಇರುವ ರೀತಿಯನ್ನು ನೋಡಿ, ಇದು ತನ್ನ ಮಗುವನ್ನು ಕಚ್ಚಿ, ಕೊಂದು ಹಾಕಿ, ಬಂದು ಇದೆ, ಎಂದು ಅಂದು ಕೊಂಡು, ದುಖ್ಖ ಪಟ್ಟು, ಬಹು ಕೋಪದಿಂದ ಒಂದು ಕಟ್ಟಿಗೆಯನ್ನು ತಕ್ಕೊಂಡು, ಅದನ್ನು ಹೊಡದು, ಕೊಂದು ಹಾಕಿದಳು. ಆ ಮೇಲೆ ಮನೆಗೆ ಬಂದು, ತೊಟ್ಲನಲ್ಲಿ ಸುಖವಾಗಿ ನಿದ್ರೆ ಮಾಡುತ್ತಾ ಇರುವ ಮಗುವನ್ನೂ ತೊಟ್ಲನ ಬದೀಲಿ ತುಂಡುಗಳಾಗಿ ಇರುವ ಹಾವನ್ನೂ ನೋಡಿ, ಅಯ್ಯೋ, ನಾನು ಎಷ್ಟು ಪಾಪಿ ಆದೆನು! ನನ್ನ ಕೂಸನ್ನು ಕಾಪಾಡಿದ ಮುಂಗಿಸಿಯನ್ನು ಅನ್ಯಾಯವಾಗಿ ಕೊಂದು ಹಾಕಿ

ದೆನೆಂದು, ಬಹು ವ್ಯಸನ ಪಟ್ಟಳು. ಆದಕಾರಣ ಕ್ಷೈಮಿಂಚದೆ, ನಿಧಾನಿಸ ಬೇಕು.

## ೨೫. ಕಥೆ.

ಅರಸನನ್ನೂ ಅವನ ದುಷ್ಟ ಮಗನನ್ನೂ ಕುರಿತದ್ದು.

ಉಜ್ಜಿನೀ ಪಟ್ಟಣದಲ್ಲಿ ಸುದರ್ಶನನೆಂಬ ರಾಯನು ಇದ್ದನು. ಆತನಿಗೆ ಒಬ್ಬ ಕುಮಾರನು. ಅವನು ನೋಡಿದವರನ್ನೆಲ್ಲಾ ಬೈಯುತ್ತಾ, ವಿದ್ವಾಂಸರನ್ನು ಪರಿಹಾಸ್ಯ ಮಾಡುತ್ತಾ, ದರಿದ್ರರನ್ನು ಬಾಧಿಸುತ್ತಾ, ಬಹು ದುರ್ಮಾರ್ಗನಾಗಿ ನಡಿಯುತ್ತಾ ಇರಲಾಗಿ, ರಾಯನು ತನ್ನ ಕುಮಾರನು ಈ ಪ್ರಕಾರ ಜನ ಕಂಟಕನಾಗಿ ಇರುವದನ್ನು ನೋಡಿ, ಚಿಂತಾಕ್ರಾಂತನಾಗಿ, ಒಂದು ದಿನ ಅವನನ್ನು ಕೊಠಡಿಗೆ ಕರಕೊಂಡು ಹೋಗಿ, ತನ್ನ ಬದೀಲಿ ಕುಳ್ಳಿರಿಸಿ ಕೊಂಡು, ನೀನು ವಿದ್ವಾಂಸರು ಮೊದಲಾದವರನ್ನು ಅವಮಾನ ಮಾಡುವದರಿಂದ ನಿನಗೆ ಮಹಾ ಪಾಪವು ಸಂಭವಿಸುತ್ತದೆ; ಅದರಿಂದ ಅವರಿಗೆ ಏನು ಕಡಿಮೆ ಇಲ್ಲ. ಇದಕ್ಕೆ ನಾನು ಒಂದು ಸಾಮ್ಯ ಹೇಳುತ್ತೇನೆ; ಏನಂದರೆ, ಆಕಾಶದಲ್ಲಿ ಮಧ್ಯಾಹ್ನ ಕಾಲದಲ್ಲಿ ಪ್ರಕಾಶಿಸುತ್ತಿರುವ ಸೂರ್ಯನನ್ನು ನೋಡಿ, ಯಾರಾದರು ಅಸಹ್ಯದಿಂದ ಬಾಯಿ ತುಂಬಾ ನೀರು ಹಾಕಿ ಕೊಂಡು, ಸೂರ್ಯನ ಮೇಲೆ ಉಗುಳಿದರೆ, ಆ ನೀರು ತಿರಿಗಿ ಅವನ ಮುಖದ ಮೇಲೆಯೇ ಬೀಳುವದೇ ಹೊರ್ತು, ಅದರಿಂದ ಸೂರ್ಯನಿಗೆ ಏನೂ ಕಡಿಮೆ ಇಲ್ಲ, ಎಂದು ಹೇಳಲಾಗಿ; ತಂದೆಯ ಮಾತುಗಳನ್ನು ಕೇಳಿ, ಯುಕ್ತವೇ ಎಂದು ಗ್ರಹಿಸಿ, ದುರ್ಗುಣಗಳನ್ನೆಲ್ಲಾ ಬಿಟ್ಟು, ಒಳ್ಳೆಯವನಾದನು.

## ೨೬. ಕಥೆ.

### ಬ್ರಾಹ್ಮಣನನ್ನೂ ಹುಲಿಯನ್ನೂ ಕುರಿತದ್ದು.

ಧಾರಾಪುರದಲ್ಲಿ ಒಬ್ಬ ಬ್ರಾಹ್ಮಣನು ಇದ್ದನು. ಒಂದು ದಿನ ಆತನು ಹುವ್ವೂ ಹಣ್ಣೂ ಕೊಯಿದು ಕೊಂಡು ಬರ ಬೇಕೆಂದು ಹೋಗಲಾಗಿ, ಅಲ್ಲಿಗೆ ಒಂದು ಹುಲಿ ಬಂತು. ಆತನು ಆ ಹುಲಿಯನ್ನು ನೋಡಿ, ಭಯ ಪಟ್ಟು, ಓಡಿದನು. ಅಷ್ಟರಲ್ಲೇ ಹುಲಿ ಆತನನ್ನು ತರಿಮಿ, ಹಿಡು ಕೊಂಡಿತು. ಬ್ರಾಹ್ಮಣನು ಹುಲಿಯೊಡನೆ ಹೇಳಿದನು ಏನಂದರೆ, ನೀನು ನನ್ನಲ್ಲಿ ದಯವಿಟ್ಟು, ಮೂರು ದಿನಗಳ ಮಟ್ಟಿಗೂ ನನ್ನನ್ನು ಸಂಹಾರ ಮಾಡದೆ, ಬಿಟ್ಟು ಬಿಟ್ಟರೆ, ನಾನು ಮನೆಗೆ ಹೋಗಿ, ನನ್ನ ಕೆಲಸವೆಲ್ಲಾ ತೀರಿಸಿ ಕೊಂಡು, ನನ್ನ ನೆಂಟರನ್ನೆಲ್ಲಾ ನೋಡಿ, ಅವರ ಕೈಯಲ್ಲಿ ಅಪ್ಪಣೆ ತೆಗೆದು ಕೊಂಡು, ಬರುತ್ತೇನೆಂದು ಹೇಳಲಾಗಿ; ನೀನು ಬಾರದೆ ಇದ್ದರೆ, ಏನು ಮಾಡುವದು? ಎಂದು ಹುಲಿ ಕೇಳಿತು. ನಿಜವಾಗಿ ಬರುತ್ತೇನೆಂದು, ಆತನು ಪ್ರಮಾಣಾ ಮಾಡಿದನು. ಆದಕಾರಣ ಒಳ್ಳೇದು, ಹೋಗಿ ಬಾ, ಎಂದು ಆತನನ್ನು ಬಿಟ್ಟು ಬಿಟ್ಟಿತು. ತರುವಾಯ ಆ ಬ್ರಾಹ್ಮಣನು ಬಹು ವಿಚಾರವುಳ್ಳವನಾಗಿ ತನ್ನ ಮನೆಗೆ ಹೋಗಿ, ಮೂರು ದಿನಗಳಲ್ಲಿ ತನ್ನ ಕೆಲಸ ಯಾವತ್ತು ತೀರಿಸಿ ಕೊಂಡು, ಹುಲಿಯೊಡನೆ ತಾನು ಬರುತ್ತೇನೆಂದು ಹೇಳಿದ ವೇಳೆಗೆ ಅದರ ಬಳಿಗೆ ಹೋದನು. ಆ ಹುಲಿಯು ಆತನ ಸತ್ಯಕ್ಕೆ ಮೆಚ್ಚಿ, ಆತನನ್ನು ಹಿಂಸೆ ಮಾಡದೆ, ಮನೆಗೆ ಹೋಗೆಂದು ಹೇಳಿತು. ಆದಕಾರಣ ಯಥಾರ್ಥವಾದಿಗಳನ್ನು ಎಲ್ಲರು ಘನ ಮಾಡುವರು.

## ೨೩. ಕಥೆ.

### ಗಿಣಿಗಳನ್ನೂ ಕೋತಿಗಳನ್ನೂ ಕುರಿತದ್ದು.

ಗೋದಾವರಿ ತೀರದಲ್ಲಿ ಒಂದು ಆಲದ ಮರ ಇತ್ತು. ಆ ಮರದ ಮೇಲೆ ಗಿಣಿಗಳು ಗೂಡುಗಳನ್ನು ಮಾಡಿಕೊಂಡು, ಅವುಗಳಲ್ಲಿ ತಮ್ಮ ಮರಿಗಳನ್ನು ಇಟ್ಟುಕೊಂಡು, ಬಹು ದಿವಸಗಳು ವಾಸವಾಗಿದ್ದವು. ಹೀಗೆ ಇರಲಾಗಿ, ಕಾರ್ತೀಕ ಮಾಸದಲ್ಲಿ ಒಂದು ದಿನ ಶಾನೆ ಮಳೆ ಸುರಿಯಿತು. ಆಗ ಆ ನದೀ ತೀರದಲ್ಲಿ ಇರುವ ಕೋತಿಗಳೆಲ್ಲಾ ಛಳಿಗೆ ತಾಳಲಾರದೆ, ಆ ಮರದ ಕೆಳಗೆ ಬಂದವು. ಆ ಮರದ ಮೇಲೆ ಇರುವ ಗಿಣಿಗಳು ಈ ಕೋತಿಗಳನ್ನು ನೋಡಿ, ದೇವರು ನಿಮಗೆ ಕೈ ಕಾಲುಗಳನ್ನು ಕೊಟ್ಟು ಇರಲಾಗಿ, ನೀವು ಒಂದು ಸ್ಥಳ ಸಂಪಾದಿಸಿಕೊಂಡು, ಅದರಲ್ಲಿ ಸುಖವಾಗಿ ವಾಸಾ ಮಾಡದೆ, ಯಾಕೆ ಈ ಪ್ರಕಾರ ಮಳೆಯಲ್ಲಿ ನೆನೆಯುತ್ತಾ ಇದ್ದೀರಿ? ಇನ್ನು ನಮ್ಮ ಮಾತುಗಳನ್ನು ಕೇಳಿ, ಈ ಮಳೆ ನಿಂತ ಮೇಲೆ ಒಂದು ಸ್ಥಳ ಸಂಪಾದಿಸಿ ಕೊಳ್ಳಿರಿ, ಎಂದು ಹೇಳಲಾಗಿ, ತಮ್ಮನ್ನು ಗಿಣಿಗಳು ಹಾಸ್ಯ ಮಾಡುತ್ತವೆ ಎಂದು ಅಂದು ಕೊಂಡು, ಮಳೆ ನಿಂತ ಮೇಲೆ, ಕೋತಿಗಳೆಲ್ಲಾ ಆ ಗಿಡವನ್ನು ಏರಿ, ಗಿಣಿಗಳ ಗೂಡುಗಳೆಲ್ಲಾ ಕಿತ್ತು, ಬಿಸಾಟು, ಅವುಗಳ ಮರಿಗಳನ್ನು ಕೊಂದು ಹಾಕಿದವು.

## ೨೮. ಕಥೆ.

### ಕಳ್ಳರನ್ನು ಮೋಸ ಮಾಡಿದ್ದು.

ಒಂದು ದಿವಸದಲ್ಲಿ ಆರು ಜನ ಕಳ್ಳರು ತೆನ್ನಾಲರಾಮಕೃಷ್ಣನ ಮನೆಯ ಹಿಂದು ಕಡೆ ಇದ್ದು, ಒಳಗೆ ಹೋಗಿ ಕದಿಯುವದಕ್ಕೆ ಸಮಯ ನೋಡುತ್ತಾ ಇರುವದನ್ನು ಅವನು ಕಂಡು, ತನ್ನ ಜಿಂದಿಗೆ ಸಕಲವನ್ನು ಭದ್ರ ಪಡಿಸಿ, ಹೆಂಡತಿಯನ್ನು ಕರೆದು, ಊರೊಳಗೆ ಕಳ್ಳರ ಅವಾಂತ್ರ ಬಹಳವಾಗಿದೆ; ಆದದರಿಂದ ನಮ್ಮ ಮನೆಯೊಳಗೆ ಇರುವ ಒಡವೆ ಎಲ್ಲವು ಒಂದು ಪೆಟ್ಟಗೆಯೊಳಗೆ ಹಾಕಿ, ನಮ್ಮ ತೋಟದಲ್ಲಿರುವ ಭಾವಿಯೊಳಗೆ ಹಾಕಿ ಇದ್ದು, ಕಳ್ಳರ ಅವಾಂತ್ರವು ತೀರಿದ ತರುವಾಯ ತಕ್ಕೊಳ್ಳ ಬಹುದು ಎಂದು, ಕಳ್ಳರು ಕೇಳುವ ಹಾಗೆ ಘಟ್ಟಿಯಾಗಿ ಹೇಳಿ, ಒಂದು ಪೆಟ್ಟಗೆಯೊಳಗೆ ಕಲ್ಲುಗಳೂ ಗುಂಡುಗಳೂ ಹಾಕಿ, ಅದನ್ನು ತಾನೂ ತನ್ನ ಮಗನೂ ಹೆಂಡತಿಯೂ ಸಹ ತಕ್ಕೊಂಡು ಹೋಗಿ, ತೋಟದ ಭಾವಿಯೊಳಗೆ ಭಳ್ಳನೆ ಹಾಕಿದರು. ಮೊದಲು ಹೇಳಿದ ಮಾತುಗಳನ್ನೂ ಭಾವಿಯೊಳಗೆ ಗುಭಳ್ಳೆಂದು ಶಬ್ದವನ್ನೂ ಕೇಳಿ, ಕಳ್ಳರು ತಮ್ಮೊಳಗೆ ಒಬ್ಬನನ್ನು ಭಾವಿಯೊಳಗೆ ಇಳಿಸಿ, ಪೆಟ್ಟಗೆ ಇಧೆಯೋ? ಇಲ್ಲವ್ರೋ? ತಿಳುಕೊಂಡು ಬಾ, ಎಂದು ಹೇಳಿದರು. ಅವನು ಇಳಿದು, ನೋಡಿ, ತಳವು ಶಿಕ್ಕದೆ ಇದ್ದದರಿಂದ, ನೀರು ಚೆಲ್ಲಿದರೆ, ಪೆಟ್ಟಗೆ ಒಬ್ಬನೇ ಸುಲಭವಾಗಿ ತಕ್ಕೊಂಡು ಬರ ಬಹುದು ಅಂದನು. ಇದು ಸರಿ ಎಂದು, ಅಲ್ಲಿ ಬಾನೆಗಳಿಂದ ಕೂಡಿ ಇದ್ದ ಎರಡು ಯಾತಗಳಿಂದಲೂ ನೀರು ಶೇದಿ

ಹಾಕುತ್ತಾ ಬಂದರು. ರಾಮಕೃಷ್ಣನು ಮರೆಯಾಗಿದ್ದು, ಗಿಡಗಳಿಗೆ ಕಾಲಿವೆಗಳು ತಿರಿಗಿಸುತ್ತಾ ಬಂದನು. ಕಳ್ಳರಿಗೆ ಈ ಮೋಸವು ತಿಳಿಯದ ಕಾರಣ, ಹಣ ತೆಗದು ಕೊಳ್ಳ ಬೇಕೆಂದು, ತುಂಬಾ ಆಶೆಯಿಂದ ನೀರು ಶೇದುತ್ತಾ ಬಂದರು. ತರುವಾಯ ರಾಮಕೃಷ್ಣನು ಬೆಳಕು ಆಗುತ್ತಾ ಬಂತೆಂದು ತಿಳಿದು—ಗಿಡಗಳಿಗೆಲ್ಲವು ನೀರು ಹರಿಯಿತು; ಆದದರಿಂದ ನೀರು ಎತ್ತುವದು ನಿಲ್ಲಿಸ ಬಹುದೆಂದು, ಅವರನ್ನು ಕರೆದು, ಘಟ್ಟಿಯಾಗಿ ಹೇಳಿದನು. ಅದನ್ನು ಕೇಳುತ್ತಲೇ, ಇಷ್ಟು ಮಟ್ಟಿಗೆ ಬಿಟ್ಟದ್ದೇ ಸಾಕೆಂದು, ಕಳ್ಳರು ಓಡಿ ಹೋದರು.

## ೨೯. ಕಥೆ.

### ಮಹಮ್ಮದ್ ಸುಲ್ತಾನನನ್ನೂ ಅವನ ಮಂತ್ರಿಯನ್ನೂ ಕುರಿತದ್ದು.

ಯಾವನ ದೇಶದಲ್ಲಿ ಮಹಮ್ಮದ್ ಸುಲ್ತಾನ್ ಎಂಬದಾಗಿ ಒಬ್ಬ ಅರಸನು ಇದ್ದನು. ಆತನು ಪರ ದೇಶಗಳಿಗೆ ಹೋಗಿ, ಯುದ್ಧವನ್ನು ಮಾಡುತ್ತಾ, ಸ್ವದೇಶದಲ್ಲಿರುವ ಪ್ರಜೆಗಳನ್ನು ಹಿಂಸೆ ಪಡಿಸುತ್ತಾ ಇರುವನು; ಆದಕಾರಣ ಆತನ ದೇಶವೆಲ್ಲಾ ಹಾಳಾಗಿ ಹೋಯಿತು. ಆ ಮೇಲೆ ಅವನ ಮಂತ್ರಿಯು ಏನಾದರೂ ಒಂದು ಉಪಾಯದಿಂದ ಈ ರಾಯನಿಗೆ ಒಳ್ಳೇ ಬುದ್ಧಿ ಬರುವ ಹಾಗೆ ಮಾಡ ಬೇಕೆಂದು ಆಲೋಚನೆ ಮಾಡಿ, ಅದು ಮೊದಲ್ಗೊಂಡು ಅವನು ರಾಯನ ಸಂಗಡ ಮಾತನಾಡುವ ವೇಳೆಯಲ್ಲಿ—ಅಯ್ಯಾ, ಪೂರ್ವದಲ್ಲಿ ತಾನು ಒಬ್ಬ ಋಷಿಯನ್ನು ಆಶ್ರಯಿಸಿ, ಆತನ ಬಳಿಯ ಪಕ್ಷಿ ಭಾಷೆ ಕಲಿತು

ಕೊಂಡ ಹಾಗೂ, ಆದದರಿಂದ ಯಾವ ಪಕ್ಷಿ ನುಡಿದಾಗ್ಯೂ, ಅದರ ಅರ್ಥವು ತನಗೆ ತಿಳಿಯುವ ಹಾಗೂ, ಹೇಳುತ್ತಾ ಇದ್ದನು. ಹೀಗೆ ಇರುವಾಗ, ಒಂದು ದಿನ ಆ ರಾಯನೂ ಮಂತ್ರಿಯೂ ಬೇಟೆಗೆ ಹೋಗಿ, ತಿರಿಗಿ ಬರುತ್ತಾ ಇರುವಾಗ, ದಾರಿಯಲ್ಲಿ ಒಂದು ಗಿಡದ ಮೇಲೆ ಎರಡು ಗೂಬೆಗಳು ಕೂತು ಕೊಂಡು, ಕೂಗುತ್ತಾ ಇರಲು; ಅದನ್ನು ರಾಯನು ಕೇಳಿ, ಮಂತ್ರಿಯನ್ನು ನೋಡಿ, ನಿನಗೆ ಪಕ್ಷಿ ಭಾಷೆ ತಿಳಿಯುವದಲ್ಲಾ? ಈ ಗೂಬೆಗಳು ಏನು ಮಾತ ನಾಡುತ್ತವೆ? ಹೇಳು, ಅನ್ನಲಾಗಿ; ಮಂತ್ರಿಯು ಆ ಮಾತುಗಳನ್ನು ಕೆಲವು ಹೊತ್ತು ಕೇಳಿದ ಹಾಗೆ ಕೇಳಿ, ರಾಯನನ್ನು ನೋಡಿ, ಅಯ್ಯಾ, ಆ ಮಾತುಗಳು ನೀವು ಕೇಳುವದಕ್ಕೆ ಯೋಗ್ಯವಾದದ್ದಲ್ಲವೆಂದು ಹೇಳಿದನು. ಅದು ಏನಾದರೂ ಆಗಲಿ; ಅವಶ್ಯಕವಾಗಿ ಹೇಳ ಬೇಕೆಂದು, ರಾಯನು ಪೀಡಿಸಿದನು. ಆ ಮೇಲೆ ಮಂತ್ರಿಯು ಹೇಳಿದನು ಏನಂದರೆ, ಈ ಗೂಬೆಗಳಲ್ಲಿ ಒಂದಕ್ಕೆ ಹೆಣ್ಣು ಮರಿ ಇದೆ; ಮತ್ತೊಂದಕ್ಕೆ ಗಂಡು ಮರಿ ಇದೆ; ಅವು ಎರಡೂ ತಮ್ಮ ಮರಿಗಳಿಗೆ ಮದಿವೆ ಮಾಡ ಬೇಕೆಂದು ಪ್ರಯತ್ನ ಮಾಡುತ್ತಾ ಇವೆ. ಅವುಗಳಲ್ಲಿ ಗಂಡು ಮರಿ ಉಂಟಾದದ್ದು ನೋಡಿ, ನಿನ್ನ ಮಗಳನ್ನು ನನ್ನ ಮಗನಿಗೆ ಕೊಡುತ್ತೀಯಲ್ಲ? ಆ ಸಮಯದಲ್ಲಿ ನನ್ನ ಮಗನಿಗೆ ಐವತ್ತು ಹಾಳು ಗ್ರಾಮಗಳನ್ನು ಕೊಡುತ್ತೀಯಾ? ಎಂದು ಕೇಳಿತು. ದೇವರ ದಯದಿಂದ ನಮ್ಮ ಮಹಮ್ಮದ್ ಸುಲ್ತಾನ್ ಸುಖವಾಗಿ ರಾಜ್ಯವನ್ನು ಆಳುತ್ತಾ ಇರುವ ಮಟ್ಟಿಗೂ ನಮಗೆ ಹಾಳು ಗ್ರಾಮಗಳಿಗೆ ಏನು ಕಡಿಮೆ? ನೀನು ಐವತ್ತು ಗ್ರಾಮಗಳನ್ನು ಕೇಳಿದಿಯಲ್ಲ? ನಾನು ಐನೂರು

ಗ್ರಾಮಗಳನ್ನು ಕೊಡುತ್ತೇನೆಂದು, ಹೆಣ್ಣು ಮರಿ ಇರುವ ಗೂಬೆ ಹೇಳುತ್ತಾ ಇದೆ ಎಂದು, ಮಂತ್ರಿ ಹೇಳಲಾಗಿ; ರಾಯನು ಕೇಳಿ, ಬಹು ವ್ಯಸನಾಕ್ರಾಂತನಾಗಿ, ಹಾಳಾಗಿ ಇದ್ದ ಗ್ರಾಮಗಳನ್ನೆಲ್ಲಾ ತಿರಿಗಿ ಕಟ್ಟಿಸಿ, ಸಕಲ ಜನಗಳಿಗೂ ಸುಖವನ್ನು ಉಂಟು ಮಾಡಿದನು.

## ೩೦. ಕಥೆ.

ಸಿಹ್ಮವನ್ನೂ ಇತರ ಮೃಗಗಳನ್ನೂ ಕುರಿತದ್ದು.

ದಂಡಕ ಅರಣ್ಯದಲ್ಲಿ ಒಂದು ಸಿಂಹ ಉಂಟು. ಅದು ಅಲ್ಲಿ ಇರುವ ಮೃಗಗಳನ್ನೆಲ್ಲಾ ಭಕ್ಷಿಸುತ್ತಿರುವದು. ಹೀಗೆ ಇರುವಲ್ಲಿ, ಒಂದು ದಿನ ಆ ಮೃಗಗಳು ಎಲ್ಲಾ ಗುಂಪು ಕೂಡಿ, ಆ ಸಿಂಹದ ದೆಶೆಯಿಂದ ತಮಗೆ ನಿರಂತರವೂ ಉಂಟಾಗುವ ಭಯವನ್ನು ಪರಿಹರಿಸಿ ಕೊಳ್ಳ ಬೇಕೆಂದು ಆಲೋಚನೆಯನ್ನು ಮಾಡಿ, ಅದರ ಬಳಿಗೆ ಹೋಗಿ, ಎಲೋ, ಮೃಗರಾಯನೇ, ನೀನು ನಮ್ಮ ಗೊಡವೆಗೆ ಬಾರದ ಹಾಗೆ ಇದ್ದರೆ, ನಿನ್ನ ಆಹಾರದ ನಿಮಿತ್ತವಾಗಿ ಒಂದು ಮೃಗವನ್ನು ನಿತ್ಯವೂ ಕ್ರಮವಾಗಿ ಕಳುಹಿಸುತ್ತೇವೆ, ಎಂದು ಹೇಳಲಾಗಿ; ಸಿಂಹವು, ಒಳ್ಳೇದು ಎಂದು ಸಮ್ಮತಿ ಪಟ್ಟು, ಅಂದಿನಿಂದ ಮೃಗಗಳ ಗೊಡವೆಗೆ ಹೋಗದೆ ಇತ್ತು. ಆ ಮೃಗಗಳು ಸಿಂಹದ ಆಹಾರದ ನಿಮಿತ್ಯ ಒಂದು ಮೃಗದ ಮೇರೆಗೆ ಕಳುಹಿಸುತ್ತಾ ಇರುವವು. ಹೀಗೆ ಕೆಲವು ದಿವಸಗಳು ನಡೆದ ಮೇಲೆ, ಒಂದು ದಿನ ನರಿಯು ಸರದಿ ಬಂದದ್ದರಿಂದ, ಅದು ಸಿಂಹದ ಕೈಯಿಂದ ಸಾಯುವದಕ್ಕೆ ಸಮ್ಮತಿಸದೆ, ಏನಾದರೂ ಒಂದು ಉಪಾ

ಯವನ್ನು ಮಾಡಿ, ಆ ಸಿಂಹವನ್ನು ಕೊಂದು, ತನ್ನ ಪ್ರಾಣವನ್ನು ರಕ್ಷಿಸಿ ಕೊಳ್ಳ ಬೇಕೆಂದು ಯೋಚನೆ ಮಾಡುತ್ತಾ, ಮೆಲ್ಲಗೆ ನಡೆದು ಹೋಗಲಾಗಿ; ಸಿಂಹವು, ತನ್ನ ಸರದೀ ವೇಳೆಗೆ ಬರಲಿಲ್ಲ ಎಂದು ಬಹು ಕೋಪವನ್ನು ಮಾಡಿ, ನೀನು ಬರುವದಕ್ಕೆ ಇಷ್ಟು ಆಲಸ್ಯ ಯಾಕೆ? ಎಂದು ಕೇಳಲು; ಅಯ್ಯಾ, ಮೃಗಗಳೆಲ್ಲಾ ನಿಮ್ಮ ಆಹಾರದ ನಿಮಿತ್ಯವಾಗಿ ಒಂದು ನರಿಯನ್ನು ನನ್ನ ವಶಕ್ಕೆ ಕೊಟ್ಟು, ನಿಮಗೆ ಒಪ್ಪಿಸಿ ಬರುವಂತೆ ನನ್ನನ್ನು ಕಳುಹಿಸಿದವು. ನಾನು ಬರುತ್ತಿರಲಾಗಿ, ದಾರಿಯಲ್ಲಿ ಮತ್ತೊಂದು ನಿಮ್ಮಂಥಾ ಸಿಂಹವು ಬಂದು, ನಿಮ್ಮ ನಿಮಿತ್ಯವಾಗಿ ತರುತ್ತಾ ಇದ್ದ ನರಿಯನ್ನು ತಾನು ತಕ್ಕೊಂಡು, ಈ ಸಂಗತಿ ನಿಮಗೆ ತಿಳಿಸುವದೆಂದು ಕಳುಹಿಸಿತು, ಎಂದು ನರಿ ಹೇಳಲಾಗಿ; ಸಿಂಹವು ಬಹು ಕೋಪವನ್ನು ಹೊಂದಿ, ತನಗೆ ಶತ್ರುವಾದ ಆ ಸಿಂಹವು ಎಲ್ಲಿ ಇಧೆಯೋ, ಆ ಸ್ಥಳಕ್ಕೆ ಕರೆದು ಕೊಂಡು ಹೋಗು ಎಂದು, ನರಿಯೊಡನೆ ಹೇಳಿತು. ಆ ನರಿ ಈ ಸಿಂಹವನ್ನು ಭಾವಿಯ ತಡಿಗೆ ಕರಕೊಂಡು ಹೋಗಿ, ಹೊಸದಾಗಿ ಬಂದು ಇರುವ ಸಿಂಹವು ಈ ಭಾವಿಯಲ್ಲಿ ಇದೆ; ನಿಮಗೆ, ಆ ಸಿಂಹವನ್ನು ನೋಡ ಬೇಕೆಂದು ಅಪೇಕ್ಷೆ ಇದ್ದರೆ, ನನ್ನನ್ನು ಎತ್ತಿ ಕೊಂಡರೆ, ತೋರಿಸುತ್ತೇನೆ ಅನ್ನಲಾಗಿ; ಸಿಂಹವು ಅದೇ ಪ್ರಕಾರವಾಗಿ ನರಿಯನ್ನು ಎತ್ತಿ ಕೊಂಡು, ಭಾವಿಯಲ್ಲಿ ತೊಂಗಿ ನೋಡಲಾಗಿ; ತನ್ನ ಪ್ರತಿ ಬಿಂಬವೂ ಆ ನರಿಯ ಪ್ರತಿ ಬಿಂಬವೂ ಕಾಣಿಸಿತು. ಆದಕಾರಣ ತನಗೆ ಶತ್ರುವಾದ ಸಿಂಹವು ಈ ಭಾವಿಯಲ್ಲಿ ನರಿಯನ್ನು ತಿನ್ನುತ್ತಾ ಇಧೆ ಎಂದು, ಅತಿ ಕೋಪದಿಂದ ತಾನು ಎತ್ತಿ ಕೊಂಡು

ಇದ್ದ ನರಿಯನ್ನು ಕೆಳಕ್ಕೆ ಇಳಿಸಿ, ಆ ಭಾವಿಯಲ್ಲಿ ಧುಮಿಕಿ, ಸತ್ತು ಹೋಯಿತು. ಆದಕಾರಣ ಪ್ರಬಲವಾದ ಶತ್ರುವನ್ನು ಉಪಾಯದಿಂದ ಜಯಿಸ ಬೇಕು.

## ೩೧. ಕಥೆ.

ಬ್ರಾಹ್ಮಣನನ್ನೂ ಬ್ರಾಹ್ಮಣ ಹುಡುಗನನ್ನೂ ಕುರಿತದ್ದು.

ಸಕಲ ಶಾಸ್ತ್ರ ಪ್ರವೀಣನಾದ ಒಬ್ಬ ಬ್ರಾಹ್ಮಣನು ಕಾಶಿಗೆ ಹೋಗ ಬೇಕೆಂದು, ತನ್ನ ಶಿಷ್ಯರೊಡನೆ ಹೊರಟು ಹೋಗುತ್ತಾ ಇರಲಾಗಿ; ಒಂದು ದಿನ ಸಾಯಂಕಾಲದ ಘಳಿಗೆ ಹೊತ್ತು ಇರುವ ವೇಳೆಯಲ್ಲಿ ಒಬ್ಬ ಬ್ರಾಹ್ಮಣ ಹುಡುಗನು ಅರಣ್ಯದಲ್ಲಿ ಆಕಳುಗಳನ್ನು ಮೇಯಿಸುತ್ತಾ ಇರುವದನ್ನು ನೋಡಿ, ತಾನು ಆ ರಾತ್ರಿ ಮಜಲು ಮಾಡ ಬೇಕೆಂದು ಇರುವ ಗ್ರಾಮ ಅಲ್ಲಿಗೆ ಎಷ್ಟು ದೂರ ಇದೆ? ಎಂದು, ಆತನನ್ನು ಕೇಳಿದನು. ಅದಕ್ಕೆ ಆ ಹುಡುಗನು ಹೇಳಿದ್ದು ಏನಂದರೆ, ನನ್ನನ್ನು ನೋಡು; ನಾನು ಮೇಯಿಸುವ ಆಕಳುಗಳನ್ನು ನೋಡು; ಅರಣ್ಯವು ನೋಡು; ಹೊತ್ತು ನೋಡು; ಇವುಗಳನ್ನು ನೋಡಿದರೆ, ನೀವು ಕೇಳಿದ ಪ್ರಶ್ನೆಗೆ ಉತ್ತರ ತಿಳಿಯುತ್ತದೆ. ಊರು ಇಲ್ಲಿಗೆ ಸಮೀಪವಾಗಿ ಇಲ್ಲದಿದ್ದರೆ, ನಾನು ಈ ಅರಣ್ಯದಲ್ಲಿ ಈ ವೇಳೆಯಲ್ಲಿ ಒಬ್ಬನೇ ಆಕಳುಗಳನ್ನು ಮೇಯಿಸುತ್ತಾ ಇರುವೆನೇ? ಎಂದು ಹೇಳಲಾಗಿ; ಆ ಬ್ರಾಹ್ಮಣನು ಈ ಮಾತುಗಳನ್ನು ಕೇಳಿ, ಇವನು ಬಹು ಬುದ್ಧಿಶಾಲಿ ಎಂದು ಎಣಿಸಿ, ಆ ಹುಡುಗನ ಹಿಂದೆ ಅವನ ಮನೆಗೆ ಹೋಗಿ, ಅವನ ತಂದೆಯನ್ನು ನೋಡಿ, ನಿನ್ನ ಕು

ಮಾರನು ಬಹು ಬುದ್ಧಿವಂತನು; ಆಕಳುಗಳನ್ನು ಮೇಯಿಸುವದಕ್ಕೆ ಯೋಗ್ಯನಲ್ಲ; ಇವನನ್ನು ನನ್ನ ಶಿಷ್ಯರ ಕೂಡಾ ಕಾಶಿಗೆ ಕಳುಹಿಸಿದರೆ, ಇವನಿಗೆ ಚನ್ನಾಗಿ ವಿದ್ಯವನ್ನು ಕಲಿಸುವೆನು, ಎಂದು ಹೇಳಲಾಗಿ; ಆತನು ಸಮ್ಮತಿ ಪಟ್ಟು, ತನ್ನ ಮಗನನ್ನು ಆ ವಿದ್ವಾಂಸನ ಸಂಗಡ ಕಳುಹಿಸಿದನು. ಆ ಮೇಲೆ ಚಿಕ್ಕವನು ಆ ಬ್ರಾಹ್ಮಣನ ಬಳಿಯು ವಿದ್ಯವನ್ನು ಕಲಿತು, ಬಹಳ ಪ್ರವೀಣನು ಆದನು.

## ೩೦. ಕಥೆ.

ಅರಸನನ್ನೂ ಬ್ರಾಹ್ಮಣನನ್ನೂ ತುರುಕನನ್ನೂ ಕುರಿತದ್ದು.

ಒಬ್ಬ ಅರಸನ ಬದೀಲಿ ಇಬ್ಬರು ಆಶ್ರಿತರು ಇದ್ದರು. ಅವರಲ್ಲಿ ಒಬ್ಬನು ಬ್ರಾಹ್ಮಣನು, ಮತ್ತೊಬ್ಬನು ತುರುಕನು. ಆ ಅರಸನು ಅವರಲ್ಲಿ ತುಂಬಾ ದಯ ಇಟ್ಟು, ಅವರಿಗೆ ನಿತ್ಯವೂ ಬಹುಮಾನಗಳನ್ನು ಕೊಡುತ್ತಾ ಇದ್ದನು. ಅದರಿಂದ ಅವರು ಭಾಗ್ಯವಂತರಾಗಿ, ಸುಖವಾಗಿ ಇದ್ದರು. ಒಂದು ದಿನ ರಾಯನು ಅವರನ್ನು ನೋಡಿ, ನೀವು ಯಾರ ಕೈಯಿಂದ ಸುಖವಾಗಿ ಇದ್ದೀರೆಂದು, ಕೇಳಿದನು. ತಮ್ಮ ಕೃಪೆಯಿಂದ ಸುಖವಾಗಿ ಇದ್ದೇನೆ ಎಂದು, ಬ್ರಾಹ್ಮಣನು ಹೇಳಿದನು. ತುರುಕನು ತಾನು ದೇವರ ಕೃಪೆಯಿಂದ ಸುಖವಾಗಿ ಇದ್ದೇನೆ ಎಂದು ಹೇಳಿದನು. ರಾಯನು ಇವರು ಹೇಳಿದ ಮಾತುಗಳನ್ನು ಪರೀಕ್ಷಿಸ ಬೇಕು ಎಂದು, ಒಂದು ಕುಂಬಳ ಕಾಯಿಯಲ್ಲಿ ಹಳ್ಳವನ್ನು ಮಾಡಿ, ಅದರ ತುಂಬಾ ಮುತ್ತುಗಳನ್ನು ಹಾಕಿ, ಅದರ ಮೇಲೆ ಮುಚ್ಚಿ, ಅದನ್ನು ಬ್ರಾಹ್ಮಣನಿಗೆ

ಕೊಟ್ಟನು; ಆ ತುರುಕನಿಗೆ ಎರಡು ಹಣವನ್ನು ಕೊಟ್ಟನು. ತರುವಾಯು, ಆ ವಿಪ್ರನಿಗೆ ಕುಂಬಳ ಕಾಯಿಯೊಳಗೆ ಮುತ್ತುಗಳು ಇರುವದು ತಿಳಿಯದೆ, ಇಷ್ಟು ಸ್ವಲ್ಪ ಬಹುಮಾನವನ್ನು ನನಗೆ ಕೊಟ್ಟನಲ್ಲಾ ಎಂದು, ಮನಸ್ಸಿನಲ್ಲಿ ಬಹಳ ವಿಚಾರ ಪಟ್ಟು, ದಾರಿಯಲ್ಲಿ ತುರುಕನನ್ನು ನೋಡಿ, ನನಗೆ ಕುಂಬಳ ಕಾಯಿ ಅಗತ್ಯವಿಲ್ಲ; ನಿನಗೆ ಬೇಕಾಗಿ ಇದ್ದರೆ, ಕುಂಬಳ ಕಾಯಿ ತೆಗದು ಕೊಂಡು, ನಿನಗೆ ಬಂದ ಎರಡು ಹಣವು ನನಗೆ ಕೊಡು ಎಂಬದಾಗಿ, ಅವನನ್ನು ಕೇಳಿದನು. ಅದಕ್ಕೆ ಆ ತುರುಕನು ಸಮ್ಮತಿ ಪಟ್ಟು, ತನ್ನ ಹಣವನ್ನು ಕೊಟ್ಟು, ಕುಂಬಳ ಕಾಯಿ ತೆಗದು ಕೊಂಡು, ಮನೆಗೆ ಹೋಗಿ, ಒಡೆದು ನೋಡಲಾಗಿ, ಅದರ ತುಂಬಾ ಮುತ್ತುಗಳು ಇದ್ದವು. ಆ ತರುವಾಯು ಅವನು ಬಹಳ ಸಂತೋಷವನ್ನು ಹೊಂದಿ, ರಾಯನ ಬಳಿಗೆ ಹೋಗಿ, ಈ ಸಂಗತಿಯನ್ನು ಹೇಳಿದನು. ಅರಸನು ಕೇಳಿ, ತನ್ನಿಂದ ಎಲ್ಲರು ರಕ್ಷಿಸಲ್ಪಡುತ್ತಾರೆ ಎಂಬ ದುರಭಿಮಾನವನ್ನು ಬಿಟ್ಟು ಬಿಟ್ಟು, ಸುಖವಾಗಿ ಇದ್ದನು. ಆದಕಾರಣ ದೇವರ ಸಹಾಯು ಇಲ್ಲದಿದ್ದರೆ, ಮನುಷ್ಯರು ಮಾಡುವ ಪ್ರಯತ್ನಗಳು ವ್ಯರ್ಥವಾಗಿ ಹೋಗುವವು.

## ೩೩. ಕಥೆ.

### ಬಡ ಬ್ರಾಹ್ಮಣನನ್ನು ಕುರಿತದ್ದು.

ಒಬ್ಬ ಬ್ರಾಹ್ಮಣನು ಇದ್ದನು. ಅವನು ಬಹಳ ದರಿದ್ರನು. ಒಂದು ದಿನ ಒಬ್ಬ ಮನುಷ್ಯನು ಒಂದು ಗಡಿ

ಗೇ ರಾಗಿ ಹಿಟ್ಟನ್ನು ದಾನಾ ಮಾಡಿದನು. ಅದನ್ನು ತೆಗೆದು ಕೊಂಡು, ಅವನು ಮನೆಗೆ ಬರುತ್ತಾ, ಶಾನೆ ಆಯಾಸವನ್ನು ಹೊಂದಿ, ಮಾರ್ಗದಲ್ಲಿ ಒಂದು ಮನೆಯ ಮುಂದೆ ಪಡಸಾಲೆಯಲ್ಲಿ ಕೂತು ಕೊಂಡು, ಆಲೋಚನೆ ಮಾಡಿದನು; ಏನಂದರೆ—ಈ ಗಡಿಗೇ ಹಿಟ್ಟು ಮಾರಿದರೆ, ನನಗೆ ಅರ್ಧ ರೂಪಾಯಿ ಬರುತ್ತೆ; ಆ ಅರ್ಧ ರೂಪಾಯಿಗೆ ಒಂದು ಮೇಕೆಯ ಮರಿಯನ್ನು ಕೊಳ್ಳುತ್ತೇನೆ; ಇದರಿಂದ ಕೆಲವು ದಿವಸಗಳಲ್ಲಿ ವಿಸ್ತಾರವಾಗಿ ಮರಿಗಳು ಹುಟ್ಟುತ್ತವೆ; ಒಂದು ಮಂದೆ ಆಗುತ್ತೆ; ಆ ಮಂದೆಯನ್ನು ಮಾರಿ, ಅದರಿಂದ ಬರುವ ಹಣಗಳಿಂದ ಆಕಳುಗಳನ್ನೂ ಎಮ್ಮೆಗಳನ್ನೂ ಕೊಳ್ಳುತ್ತೇನೆ; ಕೆಲವು ಸಂವತ್ಸರಗಳಿಗೆ ನಾನು ಎರಡು ಸಾವಿರ ಪಶುಗಳಿಗೆ ಖಾವಂದನು ಆಗುತ್ತೇನೆ; ಆಗ ಒಂದು ದೊಡ್ಡ ಮಹಡಿಯನ್ನು ಕನ್ನಡಿಯಿಂದಲೂ, ಮುತ್ತುಗಳಿಂದಲೂ ಶೃಂಗಾರವಾಗಿ ಕಟ್ಟಿಸುತ್ತೇನೆ; ಅನಂತರದಲ್ಲಿ ಸೌಂದರ್ಯವುಳ್ಳ ಸ್ತ್ರೀಯನ್ನು ಮದಿವೆ ಮಾಡಿಕೊಳ್ಳುತ್ತೇನೆ; ಆ ಸ್ತ್ರೀಯಿಂದ ನನಗೆ ಒಬ್ಬ ಕುಮಾರನು ಹುಟ್ಟುತ್ತಾನೆ; ಆ ಮೇಲೆ ನನ್ನ ಮನೋರಥ ಸ್ಥಿತಿ ಆಗುತ್ತೆ; ಆಗ ಅವಳು ನನ್ನಲ್ಲಿ ಪ್ರೇಮೆಯಾಗಿ ಇರುತ್ತಾಳೆ; ಆಗ ನಾನು ತುಂಬಾ ಸಲಿಗೆ ಕೊಡುವದು ಇಲ್ಲ; ಯಾವಾಗಲಾದರೂ ಅವಳು ನನ್ನೊಡನೆ ಸರಸ ಆಡುವದಕ್ಕೆ ಬಂದರೆ, ಒದ್ದು, ಆಚೆಗೆ ಕಳುಹಿಸುತ್ತೇನೆ ಎಂದು, ತಾನು ನಿಶ್ಚಯವಾಗಿ ಒದೆಯುವದಕ್ಕೆ ಹೋಗುವವನ ಹಾಗೆ ಕಾಲು ಝಾಡಿಸಲಾಗಿ, ಆ ಪುಡಿ ಹಿಟ್ಟು ಇದ್ದ ಗಡಿಗೆಗೆ ತಗಿಲ್ಲಿ ತುಂಡುಗಳಾಗಿ, ಹಿಟ್ಟು ಮಣ್ಣಿನಲ್ಲಿ ಕಲತು ಹೋಯಿತು. ಆದದರಿಂದ ಅವನು ಮನಸ್ಸಿನಲ್ಲಿ ನೆನಸಿದ ಸೌಖ್ಯವು ಎಲ್ಲಾ ವ್ಯರ್ಥವಾಗಿ ಹೋಯಿತು.

## ೪೪. ಕಥೆ.

### ರೋಗಿಷ್ಠನಾದ ವರ್ತಕನನ್ನೂ ಅವನ ಕಿವುಡನಾದ ಸ್ನೇಹಿತನನ್ನೂ ಕುರಿತದ್ದು.

ಒಂದು ಪಟ್ಟಣದಲ್ಲಿ ಒಬ್ಬ ವರ್ತಕನಿಗೆ ಒಬ್ಬ ಸ್ನೇಹಿತನು ಉಂಟು; ಅವನು ಕಿವುಡನು. ಒಂದು ದಿನ ಅವನು ಆ ವರ್ತಕನಿಗೆ ಶರೀರದಲ್ಲಿ ಸೌಖ್ಯವಿಲ್ಲ ಎಂದು ಕೇಳಿ, ದೇಹ ಸ್ಥಿತಿಯು ಹ್ಯಾಗೆ ಇಧೆಯೋ? ವಿಚಾರಿಸಿ ಬರೋಣ ಎಂಬದಾಗಿ, ಹೊರಗೆ ಹೊರಟು, ಅವನೊಡನೆ ತಾನು ಮಾತಾಡ ಬೇಕಾದ ಸಂಗತಿಯನ್ನು ಕುರಿತು ಮಾರ್ಗದಲ್ಲಿ ಯೋಚನೆ ಮಾಡಿದನು; ಏನಂದರೆ—ಆತನನ್ನು ನೋಡಿ, ನಾನು ಶರಣು ಮಾಡಿದ ಮೇಲೆ, ಅಯ್ಯಾ, ನಿನ್ನ ಶರೀರದ ಸ್ಥಿತಿ ಹ್ಯಾಗೆ ಇಧೆ? ಎಂದು ಕೇಳುವೆನು. ಸ್ವಲ್ಪ ಸೌಖ್ಯವಾಗಿ ಇಧೆ, ಎಂದು ಹೇಳುವನು. ನಾನು ಅದಕ್ಕೆ, ಸಂತೋಷ, ಅನ್ನುವೆನು. ಅನಂತರದಲ್ಲಿ, ನೀನು ಔಷಧವನ್ನು ತೆಗೆದು ಕೊಳ್ಳುತ್ತೀಯಲ್ಲ? ಅದಕ್ಕೆ ಏನು ಪಥ್ಯ, ಎಂದು ಕೇಳುವೆನು. ಅವನು, ಸಪ್ಪೇ ಪಥ್ಯ ಎಂದು ಹೇಳುವನು. ಅದರಿಂದ ನಿನಗೆ ಆರೋಗ್ಯ ಆಗುವದು, ಎಂದು ಹೇಳಿ, ನಿನಗೆ ಔಷಧವನ್ನು ಕೊಡುವ ವೈದ್ಯನು ಯಾರು? ಎಂದು ಕೇಳುವೆನು; ಇಂಥವನು ಎಂದು, ಅವನು ಹೇಳುವನು. ಆ ವೈದ್ಯನು ದೇವರ ಸಹಾಯದಿಂದ ನಿನ್ನ ದೇಹವನ್ನು ಸೌಖ್ಯ ಮಾಡುವನು ಎಂದು ಹೇಳಿ, ಆ ಬಳಿಕ ಅವನ ಕೈಯಲ್ಲಿ ಅಪ್ಪಣೆ ತೆಗೆದು ಕೊಂಡು, ಮನೆಗೆ ಬರುವೆನು ಎಂದು, ಈ ಪ್ರಕಾರ ಯೋಚನೆ ಮಾಡಿ ಕೊಂಡು, ಆ ವರ್ತಕನ ಮನೆಗೆ ಹೋಗಿ,

ಅವನಿಗೆ ಶರಣು ಮಾಡಿ, ಸಮೀಪದಲ್ಲಿ ಕೂತು ಕೊಂಡು, ಅಯ್ಯಾ, ಈ ದಿವಸ ನಿನ್ನ ಶರೀರದಲ್ಲಿ ಹ್ಯಾಗೆ ಇಧೆ? ಎಂದು ಕೇಳಲಾಗಿ, ಜ್ವರದಿಂದ ಬಹು ಶ್ರಮೆ ಪಡುತ್ತೇನೆ ಎಂದು, ಆ ವರ್ತಕನು ಹೇಳಿದನು. ಅವನು ಹೇಳಿದ ಮಾತು ಕಿವುಡನು ಗ್ರಹಿಸಲಾರದೆ, ತಾನು ಮುಂಚಿತವಾಗಿ ಯೋಚನೆ ಮಾಡಿದ ಪ್ರಕಾರವೇ, ಅವನು ಮಾತನಾಡುತ್ತಾನೆ ಎಂದು ಅಂದು ಕೊಂಡು, ಸಂತೋಷ, ದೇವರು ನಿನ್ನನ್ನು ಅದೇ ಪ್ರಕಾರ ಇರಿಸುವನು, ಎಂದು ಹೇಳಿದನು. ಅದಕ್ಕೆ ಆ ವರ್ತಕನು ಮೊದಲೇ ರೋಗದಿಂದ ಆಯಾಸ ಪಡುತ್ತಿದ್ದನು; ಆದಕಾರಣ ಆ ಮಾತು ಕೇಳಿ, ಬಹಳ ಕೋಪ ಮಾಡಿದನು. ಆಗ, ನೀನು ಏನು ಔಷಧವನ್ನು ತೆಗದು ಕೊಳ್ಳುತ್ತೀ? ಅದಕ್ಕೆ ಪಥ್ಯವೇನು? ಎಂದು ಕೇಳಿದನು. ಏನೋ, ಮಣ್ಣು! ಹೋಗು, ಎಂದು ಹೇಳಿದನು. ಅದರಿಂದಲೇ ನಿನ್ನ ರೋಗವು ಗುಣವಾಗುವದೆಂದು ಹೇಳಿ, ನಿನಗೆ ಔಷಧ ಕೊಡುವ ವೈದ್ಯನು ಯಾರು? ಎಂದು ಕೇಳಿದನು. ಈ ಮಾತುಗಳಿಂದ ಶಾನೆ ಅಸಹ್ಯ ಪಟ್ಟು, ಯಮನೇ ನನಗೆ ವೈದ್ಯನು, ಎಂದು ಹೇಳಿದನು. ಆತನು ಮಾಡುವ ವೈದ್ಯಕ್ಕೆ ದೇವರು ಸಹಾಯವು ಆಗಲಿ ಎಂದು ಹೇಳಿ, ಕಿವುಡನು ತನ್ನ ಮನೆಗೆ ಹೋದನು.

### ೩೫. ಕಥೆ.

ಅಸೂಯೆ ಗುಣವುಳ್ಳ ಬ್ರಾಹ್ಮಣನನ್ನು ಕುರಿತದ್ದು.

ಒಬ್ಬ ಬಡ ಬ್ರಾಹ್ಮಣನು, ತನಗೆ ಭಾಗ್ಯವು ಬೇಕೆಂಬ ಆಶೆಯಿಂದ ಒಂದು ಕೊಳದ ಮೇಲ್ಗಡೆಯಲ್ಲಿ ಕೂ

ತು ಕೊಂಡು, ದೇವರನ್ನು ಕುರಿತು ತಪಸ್ಸು ಮಾಡಿದನು. ಅದನ್ನು ನೋಡಿ, ಅವನ ನೆರೆಮನೇ ಬ್ರಾಹ್ಮಣನು ಆ ಕೊಳದ ಕೆಳಗಡೆಯಲ್ಲಿ ಕೂತು ಕೊಂಡು, ದೇವರನ್ನು ಕುರಿತು ತಪಸ್ಸು ಮಾಡಿದನು. ಈ ಪ್ರಕಾರ ಕೆಲವು ದಿವಸಗಳು ಹೋದ ಬಳಿಕ, ದೇವರು ಅವರಲ್ಲಿ ಒಬ್ಬನ ಹತ್ರಕ್ಕೆ ಬಂದು, ನಿನಗೆ ಏನು ಬೇಕು? ಅಂದನು. ಅವನು, ಆ ಕಡೆಯಲ್ಲಿ ಕೂತು ಕೊಂಡು, ತಪಸ್ಸು ಮಾಡುವವನು ನಿಮ್ಮನ್ನು ಏನು ಕೇಳುವನೋ, ಅದಕ್ಕೆ ಎರಡಷ್ಟು ನನಗೆ ಉಂಟಾಗ ಬೇಕೆಂದು ಅಂದನು. ಬಳಿಕ ದೇವರು ಮತ್ತೊಬ್ಬನ ಹತ್ರಕ್ಕೆ ಹೋಗಿ, ನಿನಗೆ ಏನು ಬೇಕು? ಅಂದನು. ಅವನು ಆ ಕಡೆಯಲ್ಲಿ ಇರುವವನು ನಿಮ್ಮನ್ನು ಕೇಳಿದ್ದು ಏನು? ಅಂದನು. ಅವನು, ನೀನು ಕೇಳುವದಕ್ಕೆ ಎರಡಷ್ಟು ನನಗೆ ಉಂಟಾಗ ಬೇಕೆಂದು, ಅಂದನು. ಇವನು ಅವನಿಗೆ ತನಗಿಂತಲೂ ಅಧಿಕ ಸಂಪತ್ತು ಬರ ಬಹುದೇ? ಎಂಬುವ ಅಸೂಯೆಯಿಂದ, ಸ್ವಾಮೀ, ನನಗೆ ಒಂದು ಕಣ್ಣು ಕೆಟ್ಟು ಹೋಗ ಬೇಕೆಂದು, ಅಂದನು. ದೇವರು ನಕ್ಕು, ಒಳ್ಳೇದು, ಅಂದನು. ಅದರಿಂದ ಇವನಿಗೆ ಒಂದು ಕಣ್ಣು ಕೆಟ್ಟ ಕೂಡಲೇ ಮತ್ತವನಿಗೆ ಎರಡು ಕಣ್ಣುಗಳು ಕೆಟ್ಟು ಹೋದವು. ಆದದರಿಂದ ಅಸೂಯ ಗುಣವುಳ್ಳವನು, ಒಬ್ಬನು ಕೆಡುವದನ್ನೇ ತನಗೆ ಭಾಗ್ಯವಾಗಿ ನೆನಸುವನು; ತನ್ನ ನಷ್ಟವನ್ನು ನೋಡನು.

## ೪೬. ಕಥೆ.

### ಬ್ರಾಹ್ಮಣ ವಿಧವೆ ಸ್ತ್ರೀಯರನ್ನೂ ನ್ಯಾಯಾಧಿಪತಿಯನ್ನೂ ಕುರಿತದ್ದು.

ದಕ್ಷಿಣ ದೇಶದಲ್ಲಿ ಒಬ್ಬ ಬ್ರಾಹ್ಮಣನು ಇದ್ದನು. ಆತನಿಗೆ ಇಬ್ಬರು ಹೆಂಡತಿಯರು. ಅವರಲ್ಲಿ ದೊಡ್ಡ ಹೆಂಡತಿಗೆ ಒಬ್ಬ ಮಗುವು ಹುಟ್ಟಿತು. ಆ ಮಗುವಿಗೆ ಏಳು ತಿಂಗಳು ಆದಾಗ, ಆ ಬ್ರಾಹ್ಮಣನು ಕಾಶಿಗೆ ಹೋಗಬೇಕೆಂದು, ತನ್ನ ಹೆಂಡತಿಗಳೊಡನೆ ಹೊರಟು, ಕೆಲವು ದೂರ ಹೋಗಿ, ದಾರಿಯಲ್ಲಿ ಸತ್ತು ಹೋದನು. ಆ ಸ್ತ್ರೀಯರು ಅಲ್ಲಿ ಒಂದು ಅಗ್ರಹಾರದಲ್ಲಿ ಪ್ರವೇಶಿಸಿ, ಆ ಮಗುವನ್ನು ಇಬ್ಬರೂ ಬಹು ಪ್ರೀತಿಯಿಂದ ಸಾಕುತ್ತಾ ಇದ್ದರು. ಆದಕಾರಣ ಅದಕ್ಕೆ ಆ ಇಬ್ಬರಲ್ಲಿ ತಾಯಿ ಯಾರೋ? ತಿಳಿಯದೆ ಇತ್ತು. ಹೀಗೆ ಇರಲಾಗಿ, ಒಂದು ದಿನ ಚಿಕ್ಕ ಹೆಂಡತಿಗೂ ದೊಡ್ಡ ಹೆಂಡತಿಗೂ ಬಹಳ ಕಲಹ ಉಂಟಾಗಿ, ಇನ್ನು ಮೇಲೆ ನಿನ್ನೊಡನೆ ಇರುವದಿಲ್ಲ ಎಂದು, ಚಿಕ್ಕ ಹೆಂಡತಿಯು ಮಗುವನ್ನು ಎತ್ತಿ ಕೊಂಡು, ಮನೆಯನ್ನು ಬಿಟ್ಟು ಹೋದಳು. ಆಗ ದೊಡ್ಡ ಹೆಂಡತಿಯು ಅವಳನ್ನು ನೋಡಿ, ನನ್ನ ಮಗುವನ್ನು ನೀನು ಯಾಕೆ ಎತ್ತಿ ಕೊಂಡು ಹೋಗುತ್ತೀ? ಎಂದು ಮಗುವನ್ನು ಹಿಡಿದು ಕೊಂಡಳು. ನಾನು ಹೆತ್ತೆನು; ಆದದರಿಂದ ಎತ್ತಿ ಕೊಂಡು ಹೋಗುತ್ತೇನೆ ಎಂದು, ಚಿಕ್ಕ ಹೆಂಡತಿ ಹೇಳಿದಳು. ಆ ಬಳಿಕ ಅವರಿಬ್ಬರು ವ್ಯಾಜ್ಯ ಆಡುತ್ತಾ, ನ್ಯಾಯಾಧಿಪತಿಯ ಬಳಿಗೆ ಹೋಗಿ, ತಮ್ಮ ತಮ್ಮ ನ್ಯಾಯಗಳನ್ನು ಹೇಳಿ ಕೊಳ್ಳಲಾಗಿ; ಆತನು ಸ್ವ

ಲ್ಪ ಹೊತ್ತು ಆಲೋಚನೆ ಮಾಡಿ, ತನ್ನ ಸೇವಕರನ್ನು ಕರೆದು, ಈ ಕೂಸನ್ನು ಎರಡಾಗಿ ಶೀಳಿ, ಈ ಸ್ತ್ರೀಯರಿಗೆ ಸರಿ ಭಾಗವಾಗಿ ಕೊಡಿರಿ ಎಂದು, ಆಜ್ಞಾಪಿಸಿದನು. ಆಗ ಚಿಕ್ಕ ಹೆಂಡತಿ ಮಾತನಾಡದೆ, ಸುಮ್ಮನೆ ಇದ್ದಳು. ದೊಡ್ಡ ಹೆಂಡತಿ ಹೆತ್ತ ತಾಯಿ ಆದಕಾರಣ ತನ್ನ ಮಗುವನ್ನು ಕೊಲ್ಲಿಸುವದಕ್ಕೆ ಮನಸ್ಸು ಒಪ್ಪದೆ, ಅದು ಹ್ಯಾಗಾದರೂ ಜೀವದಿಂದ ಇದ್ದರೆ, ಸಾಕು, ಎಂಬ ಮಮತೆಯಿಂದ ನ್ಯಾಯಾಧಿಪತಿಯನ್ನು ನೋಡಿ, ಅಯ್ಯಾ, ಇದು ಅವಳ ಮಗುವೇ ಹೊರ್ತು ನನ್ನ ಮಗುವಲ್ಲ; ಅವಳಿಗೆ ಕೊಡಿಸಿರಿ, ಎಂದು ಹೇಳಿದಳು. ರಾಯನು ಆ ಮಾತು ಕೇಳಿ, ಈ ಮಗುವಿಗೆ ತಾಯಿ ದೊಡ್ಡವಳೇ ಸರಿ, ಎಂದು ನಿಶ್ಚೈಯಿಸಿ, ಆ ಮಗುವನ್ನು ಆಕೆಗೆ ಕೊಡಿಸಿದನು. ಆದಕಾರಣ ನ್ಯಾಯ ತೀರಿಸುವವರಿಗೆ ಬಹಳ ಉಪಾಯಗಳು ತಿಳಿದಿರ ಬೇಕು.

## ೩೭. ಕಥೆ.

### ವರ್ತಕನನೂ ಅವನ ಕೆಟ್ಟ ಸೇವಕನನೂ ಕುರಿತದ್ದು.

ಇಂದ್ರಪ್ರಸ್ಥ ಪುರದಲ್ಲಿ ಒಬ್ಬ ವರ್ತಕನು ಇದ್ದನು. ಅವನು ಬಹು ಭಾಗ್ಯವಂತನು. ಅವನ ಬದೀಲಿ ಇದ್ದ ಸೇವಕರಲ್ಲಿ ಒಬ್ಬನು ಒಂದು ದಿನ ರಾತ್ರಿ ಅವನ ಮನೆಯಲ್ಲಿ ಸ್ವಲ್ಪ ದ್ರವ್ಯವನ್ನು ಕದ್ದು ಕೊಂಡು, ಓಡಿ ಹೋದನು. ಕೆಲವು ದಿವಸಗಳ ತರುವಾಯ, ಆ ವರ್ತಕನು ಮತ್ತೊಂದು ಪಟ್ಟಣಕ್ಕೆ ವರ್ತಕತನದ ನಿಮಿತ್ಯವಾಗಿ ಹೋಗಿ, ತನ್ನ ಮನೆಯ ದ್ರವ್ಯವನ್ನು ಕದ್ದು ಕೊಂಡು ಹೋ

ದ ಸೇವಕನು ಅಲ್ಲಿ ಬೀದಿಯಲ್ಲಿ ಹೋಗುತ್ತಿರಲಾಗಿ, ನೋಡಿ, ಕೈ ಹಿಡಿದು ಕೊಂಡು, ನನ್ನ ಮನೆಯಿಂದ ದ್ರವ್ಯವನ್ನು ಯಾತಕ್ಕೆ ಕದ್ದು ಕೊಂಡು ಹೋದೆ? ಎಂದು ಕೇಳಿದನು. ಆ ಬಳಿಕ ಅವನು ಈ ವರ್ತಕನ ನಡುವಿಗೆ ಕೈ ಹಾಕಿ, ನೀನು ನನ್ನ ಸೇವಕನು; ನನ್ನ ಮನೆಯಲ್ಲಿ ಇದ್ದ ದ್ರವ್ಯವನ್ನು ಕದ್ದು ಕೊಂಡು ಹೋಗಿ ಇದ್ದಿ; ಅದು ಮೊದಲ್ಗೊಂಡು ನಿನ್ನನ್ನು ಹುಡುಕುತ್ತಾ ಇರಲಾಗಿ, ಈ ದಿನ ಶಿಕ್ಕಿದಿ; ಈಗ ಆ ದ್ರವ್ಯವೆಲ್ಲಾ ಕೊಟ್ಟು, ಹೋಗು, ಎಂದು ತಗಾದೀ ಮಾಡಿದನು. ಆಗ ಅವರಿಬ್ಬರೂ ವ್ಯಾಜ್ಯವಾಡುತ್ತಾ, ನ್ಯಾಯಾಧಿಪತಿಯ ಬಳಿಗೆ ಹೋಗಿ, ತಮ್ಮ ಸಂಗತಿಗಳನ್ನು ಅವನೊಡನೆ ಹೇಳಿ ಕೊಳ್ಳಲಾಗಿ, ಆತನು ಸ್ವಲ್ಪ ಹೊತ್ತು ಯೋಚನೆ ಮಾಡಿ, ಅವರಿಬ್ಬರ ತಲೆಗಳು ಒಂದು ಕಿಟಕಿಯಲ್ಲಿ ಇರಿಸಿರಿ, ಎಂದು ಆಜ್ಞಾಪಿಸಿ, ತಲಾರಿಯನ್ನು ಕರಿಸಿ, ಇವರಲ್ಲಿ ಯಾರು ಸೇವಕನೋ, ಅವನ ತಲೆ ಹೊಡದು ಹಾಕು, ಎಂದು ಹೇಳಿದನು. ಆ ಮೇಲೆ ಆ ವರ್ತಕನ ಮನೆಯಲ್ಲಿ ದ್ರವ್ಯವನ್ನು ಕದ್ದು ಕೊಂಡು ಹೋದವನು ನಿಜವಾದ ಸೇವಕನು ಆದದರಿಂದ, ತನ್ನ ತಲೆಯನ್ನು ಹೊಡದು ಹಾಕುತ್ತಾರೆ ಎಂದು, ಭಯ ಪಟ್ಟು, ಕಿಟಕಿಯೊಳಗಿಂದ ತಲೇ ಈಚೆಗೆ ತೆಗೆದನು; ಆ ವರ್ತಕನು ಕದಲದ ಹಾಗೆ ಇದ್ದನು. ಇದರಿಂದ ನ್ಯಾಯಾಧಿಪತಿಯು ಕಿಟಕಿಯೊಳಗಿಂದ ಈಚೆಗೆ ತಲೇ ತೆಗೆದವನು ಆ ವರ್ತಕನ ಸೇವಕನು ಎಂದೂ, ಅವನ ಮನೆಯಲ್ಲಿ ದ್ರವ್ಯವನ್ನು ಕದ್ದವನೆಂದೂ ಗ್ರಹಿಸಿ, ಆ ಸೇವಕನನ್ನು ಚನ್ನಾಗಿ ಶಿಕ್ಷಿಸಿದನು.

## ೩೮. ಕಥೆ.

### ಅರಸನನೂ ಅವನ ಅಗಸನನೂ ಕುರಿತದ್ದು.

ಕಳಿಂಗ ದೇಶದಲ್ಲಿ ಒಬ್ಬ ರಾಯನು ಉಂಟು. ಆತನಿಗೆ ಒಬ್ಬ ಅಗಸನು ಪ್ರತಿ ದಿನವೂ ಬಟ್ಟೆಗಳನ್ನು ಚನ್ನಾಗಿ ಒಗೆದು, ತಂದು ಕೊಡುತ್ತಾ ಇದ್ದನು. ಒಂದು ದಿನ ಅವನು ಒಗೆದ ಬಟ್ಟೆಗಳನ್ನು ನೋಡಿ, ರಾಯನು ಬಹಳ ಸಂತೋಷ ಪಟ್ಟು, ಅವನನ್ನು ಕರೆದು, ನೀನು ಬಟ್ಟೆಗಳನ್ನು ಒಗೆದ್ದಕ್ಕೆ ನಾನು ಬಹಳವಾಗಿ ಮೆಚ್ಚಿದೆನು; ನೀನು ಏನು ಅಪೇಕ್ಷಿಸುತ್ತೀ? ಕೇಳಿಕೋ; ಕೊಡುತ್ತೇನೆ, ಎಂದು ಹೇಳಲಾಗಿ; ಆ ಅಗಸನು ರಾಯನನ್ನು ನೋಡಿ, ಅಯ್ಯಾ, ತಮ್ಮ ಬಳೀಲಿ ಮಂತ್ರಿಯಾಗಿ ಇರಬೇಕೆಂದು, ಅಪೇಕ್ಷೆ ಶಾನೆ ಉಂಟು; ಆದದರಿಂದ ತಮಗೆ ನನ್ನ ಮೇಲೆ ದಯ ಇದ್ದರೆ, ಮಂತ್ರಿತ್ವವನ್ನು ಕೊಡಿಸಬೇಕು, ಎಂದು ಹೇಳಿ ಕೊಂಡನು. ಆ ಬಳಿಕ ಆ ರಾಯನು ತನ್ನ ಬಹು ದಿವಸದಿಂದ ಇದ್ದ ಮಂತ್ರಿಯನ್ನು ತೆಗೆದು ಹಾಕಿ, ಅವನ ಉದ್ಯೋಗವು ಅಗಸನಿಗೆ ಕೊಟ್ಟನು. ಕೆಲವು ದಿವಸಗಳು ಹೋದ ಮೇಲೆ, ಆ ರಾಯನಿಗೆ ಶತ್ರುಗಳಾದ ರಾಯರು, ಆತನ ಬಳೀಲಿ ಇದ್ದ ಅಗಸ ಮಂತ್ರಿ ಕೈಲಾಗದವನೆಂದು ತಿಳಿದು, ಆ ರಾಯನ ಮೇಲೆ ದಂಡು ಎತ್ತಿ, ಯುದ್ಧಕ್ಕೆ ಬಂದರು. ಆ ವಿವರವನ್ನು ರಾಯನು ಕೇಳಿ, ಮಂತ್ರಿಯನ್ನು ಕರಿಸಿ, ನಮ್ಮ ಸೈನ್ಯವೆಲ್ಲಾ ಯುದ್ಧಕ್ಕೆ ಸಿದ್ಧವಾಗಿ ಇರಿಸು, ಎಂದು ಆಜ್ಞಾಪಿಸಲಾಗಿ; ನಮಗೆ ಮುಂದೆ ಆಗ ತಕ್ಕ ಕೆಲಸಕ್ಕೆ ನಾನು ಮುಂಚಿತವಾಗಿಯೇ ಜಾಗ್ರತೆ ಮಾಡಿದ್ಧೇನೆ; ಆದಕಾ

ರಣ ಶತ್ರುಗಳಿಗೆ ಭಯ ಪಡ ತಕ್ಕ ನಿಮಿತ್ಯವಿಲ್ಲ ಎಂದು, ಹೇಳಿದನು. ಆ ಮಾತು ನಿಜವೇ ಎಂದು, ರಾಯನು ನಂಬಿ, ಸುಮ್ಮನೆ ಇದ್ದನು. ಆ ಮೇಲೆ ಶತ್ರುಗಳ ದಂಡು ಪಟ್ಣವನ್ನು ಸುತ್ತಿ ಕೊಂಡಿತು. ಆಗ ರಾಯನು ಮಂತ್ರಿಯನ್ನು ಕರೆದು, ಶತ್ರುಗಳು ನಮ್ಮ ಪಟ್ಣವನ್ನು ಸುತ್ತಿ ಕೊಂಡರಲ್ಲ; ನೀನು ಏನು ಜಾಗ್ರತೆ ಮಾಡಿ ಇದ್ಧಿ? ಎಂದು ಕೇಳಲಾಗಿ; ಮಂತ್ರಿಯು ರಾಯನನ್ನು ನೋಡಿ, ಶತ್ರುಗಳು ಪಟ್ಣವನ್ನು ಮುತ್ತಿ ಕೊಂಡಿದ್ದರಿಂದ ನಮಗೆ ಏನು ಭಯವಿಲ್ಲ; ಈ ರಾಜ್ಯದ ವಿಚಾರಣೆ ಮಾಡುವದು ಬಹು ಕಷ್ಟ; ಈ ಕಷ್ಟ ಹ್ಯಾಗೆ ಪರಿಹಾರವಾಗುವದೆಂದು ವಿಚಾರಿಸುತ್ತಿರಲಾಗಿ, ದೈವಾಧೀನದಿಂದ ಶತ್ರುಗಳು ಬಂದು, ನಮ್ಮ ಪಟ್ಣವನ್ನು ಮುತ್ತಿ ಕೊಂಡರು. ಅವರೇ ಈ ರಾಜ್ಯದ ದುಃಖವನ್ನು ಅನುಭವಿಸಲಿ; ನಾನು ಈ ಪಟ್ಣದಲ್ಲಿ ಬಹು ದಿವಸಗಳಿಂದ ನೂರು ಮನೆಗಳ ಬಟ್ಟೆಗಳನ್ನು ಒಗೆಯುತ್ತಾ ಇದ್ದೆನು; ಮಂತ್ರಿತ್ವ ಬಂದ ಮೇಲೆ ಆ ಉದ್ಯೋಗವನ್ನು ಬಿಟ್ಟು ಬಿಟ್ಟೆನು; ಈಗ ತಿರಿಗಿ ಅದನ್ನು ಸಂಪಾದಿಸಿ, ಅರ್ಧ ನಿಮಗೆ ಸರಿಯಾಗಿ ಕೊಟ್ಟು, ಅರ್ಧ ನಾನು ಅನುಭವಿಸುತ್ತೇನೆ; ಆ ಉದ್ಯೋಗದಿಂದ ನಮಗೆ ಏನು ಕಷ್ಟವಿಲ್ಲ. ಈ ಸಂಗತಿಗಳೆಲ್ಲಾ ತಿಳಿದವನು ಆಗಿದ್ದರಿಂದ ನಾನು ಮೊದಲೇ ಜಾಗ್ರತೆ ಮಾಡಿ ಇದ್ಧೇನೆಂದು, ಹೇಳಿದೆನೆಂದು ಹೇಳಲಾಗಿ, ಇಂಥಾ ಅವಿವೇಕಿಯನ್ನು ಶೇರಿಸಿದ್ದರಿಂದ ಅಲ್ಲವೇ ನನಗೆ ಇಷ್ಟು ಕಷ್ಟ ಬಂತೆಂದು, ರಾಯನು ಬಹು ವ್ಯಾಕುಲ ಪಟ್ಟನು. ಆದ ಕಾರಣ ಅಯೋಗ್ಯರನ್ನು ಸಮೀಪದಲ್ಲಿ ಶೇರಿಸ ಬಾರದು.

## ೪೯. ಕಥೆ.

ಕಾಗೆಯನ್ನೂ ಹಂಸೆಯನ್ನೂ ಕುರಿತದ್ದು.

ನರ್ಮದಾ ತೀರದಲ್ಲಿ ಒಂದು ಆಲದ ಮರದ ಮೇಲೆ ಒಂದು ಕಾಗೆ ಇತ್ತು. ಆ ಮಾರ್ಗದಲ್ಲಿ ಒಂದು ಹಂಸೆ ಹೋಗುತ್ತಾ ಇರಲು, ಕಾಗೆ ನೋಡಿ, ನೀನು ಎಲ್ಲಿಗೆ ಹೋಗುತ್ತೀ? ಎಂದು ಅಂತಃಕರಣದಿಂದ ಕೇಳಿತು. ನಾನು ಮಾನಸ ಸರೋವರಕ್ಕೆ ಹೋಗುತ್ತೇನೆಂದು ಹೇಳಿತು. ಆದರೆ ನಾನು ಅಲ್ಲಿಗೆ ಬರುತ್ತೇನೆ, ನಿನ್ನ ಸಂಗಡ ಕರೆದು ಕೊಂಡು ಹೋಗುತ್ತೀಯಾ? ಎಂದು, ಕಾಗೆ ಹೇಳಿತು. ಆ ಮಾತುಗಳನ್ನು ಹಂಸೆ ಕೇಳಿ, ಎಲೋ ಕಾಗೇ, ಮಾನಸ ಸರೋವರ ಎಲ್ಲಿ? ನೀನು ಎಲ್ಲಿ? ಅಷ್ಟು ದೂರ ನೀನು ಬರಲಾರೆ, ಎಂದು ಹೇಳಲಾಗಿ; ಕಾಗೆಗೆ ಬಹಳ ಕೋಪ ಬಂದು, ಎಲೋ, ಹಂಸೇ, ನೀನು ಗರ್ವದಿಂದ ಶರೀರವು ತಿಳಿಯದೆ ಮಾತಾಡುತ್ತೀ; ನಿಶ್ಚಯ ವಿಚಾರಿಸಿದರೆ, ನಾನೇ ನಿನಗಿಂತ ಬಹು ತ್ವರೆಯಾಗಿ ಹಾರುತ್ತೇನೆ; ಇದಕ್ಕೆ ದೃಷ್ಟಾಂತರ ಈಗಲೇ ತೋರಿಸುತ್ತೇನೆ; ನನ್ನ ಸಂಗಡ ಹೊರಟು ಬಾ, ಎಂದು ಆಕಾಶ ಮಾರ್ಗಕ್ಕೆ ನೆಗಿದು, ಸಮುದ್ರದ ಮೇಲೆ ಸ್ವಲ್ಪ ದೂರ ಹಂಸೆಯೊಡನೆ ಹೋಗಿ, ಆ ಮೇಲೆ ತಾನು ಅದಕ್ಕಿಂತಲೂ ಮುಂಚಿತವಾಗಿ ಹತ್ತು ಮಾರು ದೂರ ನೆಗಿದು, ಹಿಂದಕ್ಕೆ ಹಂಸೆಯ ಬಳಿಗೆ ಬಂದು, ನೀನು ಏನೋ ಬಹು ತ್ವರೆಯಾಗಿ ನಡಿಯುತ್ತೇನೆಂದು ಹೇಳಿದಿ, ನನ್ನ ಸಂಗಡ ಬರಲಾರದೆ ಹೋದೆಯಲ್ಲಾ? ನಿನ್ನ ಶಕ್ತಿ ನೀನು ವಿಚಾರಿಸಿ ಕೊಳ್ಳದೆ, ನನ್ನನ್ನು ತಿರಸ್ಕರಿಸಿದೆ ಎಂದು ಅಪಹಾಸ್ಯ ಮಾಡುತ್ತಾ, ಮು

ತ್ತು ಸ್ವಲ್ಪ ದೂರ ಹೋಗುವಾಗ್ಯೆ, ಕಾಗಿಯು ಬಹಳ ಬಳಲಿ, ಹಾರುವದಕ್ಕೆ ರೆಕ್ಕೆ ಬಾರದೆ, ತಲ್ಲಣಿಸುತ್ತಿರಲಾಗಿ, ಹಂಸೆ ಕಾಗಿಯನ್ನು ನೋಡಿ, ನಕ್ಕು, ಅದನ್ನು ನೀರಿನಲ್ಲಿ ಬೀಳದ ಹಾಗೆ ತನ್ನ ರೆಕ್ಕೆಗಳ ಮೇಲೆ ಇಟ್ಟು ಕೊಂಡು, ತಡಿಗೆ ತಂದು, ಬಿಟ್ಟು ಬಿಟ್ಟಿತು. ಆದಕಾರಣ ಅಶಕ್ತನಾದ ದುರ್ಜನನು ಶಕ್ತಿವಂತನಾದ ಸಜ್ಜನನನ್ನು ಮುಂಚಿತವಾಗಿ ತಿರಸ್ಕರಿಸಿ, ಆ ಮೇಲೆ ತಾನೇ ನಾಚಿಕೆಯನ್ನು ಹೊಂದುವನು.

## ೪೦. ಕಥೆ.

### ಇಬ್ಬರು ನೇಯಿಗೆಯವರನ್ನು ಕುರಿತದ್ದು.

ಕರ್ನಾಟಕ ದೇಶದಲ್ಲಿ ಹೈಮಂತನೆಂಬ ಸಾಲೆಯವನು ಇದ್ದನು. ಅವನು ಮೇಲು ಮೇಲಾದ ಬಟ್ಟೆಗಳನ್ನು ಚನ್ನಾಗಿ ನೇಯುತ್ತಾ ಇರುವನು; ಅದರಿಂದ ಅವನಿಗೆ ಜೀವನಕ್ಕೆ ಸಾಲದೆ, ಬಹು ಕಷ್ಟವಾಗಿ ಇತ್ತು. ಅವನ ಮನೆಯ ನೆರೆಯಲ್ಲಿ ಧೀಮಂತನೆಂಬ ಒಬ್ಬ ಸಾಲೆಯವನು ಉಂಟು; ಅವನು ದಪ್ಪದ ಬಟ್ಟೆಗಳನ್ನು ನೇಯುತ್ತಾ, ಅವುಗಳಿಂದ ಸಾವಿರಾರು ವರಹಾ ಲಾಭವು ಸಂಪಾದಿಸಿಕೊಂಡು, ಸುಖವಾಗಿ ಇದ್ದನು. ಆದಕಾರಣ ಆ ಹೈಮಂತನೆಂಬವನು ಒಂದು ದಿನ ತನ್ನ ಹೆಂಡತಿಯನ್ನು ನೋಡಿ, ನಾನು ಕಷ್ಟ ಪಟ್ಟು, ಬಹು ನಾಣ್ಯವಾದ ಮೇಲು ಬಟ್ಟೆಗಳನ್ನು ನೇಯುತ್ತೇನೆ; ನಮಗೆ ಅನ್ನಕ್ಕೆ ನಡಿಯುವದೇ ಅತಿ ಪ್ರಯಾಸವಾಗಿದೆ. ಕೆಲಸಕ್ಕೆ ಬಾರದ ದಪ್ಪದ ಬಟ್ಟೆಗಳನ್ನು ನೇಯುವವನಾದ ನಮ್ಮ ನೆರೆ ಮ

ನೆಯವನು ಬಹಳ ಭಾಗ್ಯವಂತನಾಗಿ ಇದ್ಧಾನೆ; ಇಲ್ಲಿ ನನ್ನ ಸಾಮರ್ಥ್ಯವು ಯಾರಿಗೂ ತಿಳಿಯದು. ಆದಕಾರಣ ಈ ದೇಶವನ್ನು ಬಿಟ್ಟು, ಮತ್ತೊಂದು ದೇಶಕ್ಕೆ ಹೋಗಿ, ವಿಸ್ತಾರವಾಗಿ ಹಣವನ್ನು ಸಂಪಾದಿಸಿ ಕೊಂಡು ಬರುತ್ತೇನೆಂದು ಹೇಳಲಾಗಿ; ನೀನು ಸ್ವದೇಶವನ್ನು ಬಿಟ್ಟು, ಪರದೇಶಕ್ಕೆ ಹೋಗಿ, ಯಾಕೆ ಶ್ರಮೆ ಪಡುತ್ತೀ? ಎಂದು ಹೆಂಡತಿ ಎಷ್ಟು ಹೇಳಿದಾಗ್ಯೂ, ಕೇಳದೆ, ಮನೆಯನ್ನು ಬಿಟ್ಟು, ಮತ್ತೊಂದು ಪಟ್ಣಕ್ಕೆ ಹೋಗಿ, ಅಲ್ಲಿ ಇರುವ ಜನರಿಗೆ ಇಷ್ಟವಾದ ವಸ್ತ್ರಗಳನ್ನು ನೇಯುತ್ತಾ ಇದ್ದು, ಅದರಿಂದ ಕೆಲವು ದಿನಗಳಿಗೆ ವಿಸ್ತಾರವಾಗಿ ಧನವು ಸಂಪಾದಿಸಿ, ತನ್ನ ಸ್ಥಳಕ್ಕೆ ಬರ ಬೇಕೆಂದು ಹೊರಟು ಬರುತ್ತಾ, ಒಂದು ದಿನ ರಾತ್ರಿ ಛತ್ರದಲ್ಲಿ ಇಳಿದು, ತನ್ನ ಹಣವೆಲ್ಲಾ ಅಲ್ಲಿ ಒಂದು ಕಡೆ ಭದ್ರ ಮಾಡಿ, ಮಲಗಿ, ನಿದ್ರೆ ಹೋಗುತ್ತಾ ಇರಲು; ಆ ಛತ್ರದಲ್ಲಿ ಕಳ್ಳರು ಇಳ್ಳೀ ಬಿದ್ದು, ಅವನ ಹಣವೆಲ್ಲಾ ಕದ್ದು ಕೊಂಡು ಹೋದರು. ಆ ಮೇಲೆ ಮಾರಣೇ ದಿನ ಇವನು ಎದ್ದು, ನೋಡಲಾಗಿ, ತನ್ನ ಹಣವೆಲ್ಲಾ ಹೋಯಿತು; ಅದರಿಂದ ಬಹಳ ವ್ಯಸನವನ್ನು ಹೊಂದಿ, ತನ್ನ ದೇಶಕ್ಕೆ ತಿರುಗಿ ಹೋಗಿ, ಅಲ್ಲಿ ದೊರಕಿದ್ದರಲ್ಲಿಯೇ ಜೀವನ ಮಾಡುತ್ತಾ ಬಂದನು.

## ೪೭. ಕಥೆ.

ಮುದಿಕಿಯನ್ನೂ ಊರಿನವರನ್ನೂ ಕುರಿತದ್ದು.

ಪೆನ್ನಗರ ಎಂಬ ಊರಿನಲ್ಲಿ ಒಬ್ಬ ಮುದಿಕಿ ಇದ್ದಳು. ಅವಳ ಮನೆಯಲ್ಲಿ ಒಂದು ಕುಂಪಟಿಯೂ ಒಂದು ಕೋ

ಳಿಯೂ ಇರುವವು. ಆದಕಾರಣ ಪ್ರತಿ ದಿನವು ಬೆಳಗಿನ ಝಾವಿನಲ್ಲಿ ಆ ಕೋಳಿ ಕೂಗುತ್ತಲೇ, ಆ ಊರಿನವರೆಲ್ಲಾ ಎದ್ದು, ಈ ಮುದಿಕಿಯ ಮನೆಗೆ ಬಂದು, ಬೆಂಕಿ ತಕ್ಕೊಂಡು ಹೋಗುವರು. ಈ ಪ್ರಕಾರ ಬಹು ದಿವಸಗಳು ನಡದ ಮೇಲೆ, ಒಂದು ದಿನ ಆ ಮುದಿಕಿ, ನನ್ನ ಕೋಳಿ ಕೂಗಿದ್ದರಿಂದ ಬೆಳಕು ಆಗುತ್ತೆ; ನನ್ನ ಮನೆಯಲ್ಲಿ ಬೆಂಕಿ ಇರುವದ್ದರಿಂದ ಈ ಊರಿನವರೆಲ್ಲಾ ಬೆಂಕಿಯನ್ನು ತೆಗೆದು ಕೊಂಡು ಹೋಗಿ, ಅಡಿಗೆಯನ್ನು ಮಾಡಿ ಕೊಂಡು, ಊಟಾ ಮಾಡುತ್ತಾರೆ; ನಾನು ಈ ಊರು ಬಿಟ್ಟು ಹೋದರೆ, ಇಲ್ಲಿ ಹ್ಯಾಗೆ ಹೊತ್ತು ಹುಟ್ಟುತ್ತದೋ, ಈ ಊರಿನವರು ಹ್ಯಾಗೆ ಊಟಾ ಮಾಡುತ್ತಾರೋ, ನೋಡೋಣಾ ಎಂದು, ಯೋಚನೆ ಮಾಡಿ, ಯಾರ ಸಂಗಡಲೂ ಹೇಳದೆ, ಕೋಳಿಯನ್ನೂ ಕುಂಪಟಿಯನ್ನೂ ತೆಗೆದು ಕೊಂಡು, ಆ ಊರಿಗೆ ದೂರವಾಗಿರುವ ಅರಣ್ಯಕ್ಕೆ ಹೋಗಿ, ಕೂತು ಕೊಂಡಳು. ಮಾರಣೆ ದಿವಸ ಬೆಳಗ್ಯೆ ಆ ಊರಿನಲ್ಲಿ ಇರುವವರೆಲ್ಲರು ಎದ್ದು, ಆ ಮುದಿಕಿಯ ಮನೆಗೆ ಯಾವಾಗಿನ ಹಾಗೆ ಬೆಂಕಿಯ ನಿಮಿತ್ಯ ಬರಲಾಗಿ, ಆಕೆಯು ಮನೆಯಲ್ಲಿ ಇಲ್ಲ. ಆದಕಾರಣ ಎಲ್ಲಿಗೆ ಹೋದಳೋ? ಏನೋ? ಎಂದು ಅಂದು ಕೊಂಡು, ಇನ್ನೊಂದು ಸ್ಥಳದಿಂದ ಬೆಂಕಿ ತಂದು ಕೊಂಡು, ತಮ್ಮ ತಮ್ಮ ಕೆಲಸಗಳನ್ನು ನಡಿಸಿ ಕೊಂಡರು. ಈ ಮುದಿಕಿ ಆ ಅರಣ್ಯದಲ್ಲಿ ಸಾಯಂಕಾಲದ ಮಟ್ಟಿಗೂ ಉಪವಾಸವಾಗಿದ್ದು, ಆ ಊರಿನಿಂದ ಒಬ್ಬನು ಎಲ್ಲಿಗೋ ಕೆಲಸವಾಗಿ ಆ ಮಾರ್ಗದಲ್ಲಿ ಹೋಗುತ್ತಾ ಇರಲು; ಆತನನ್ನು ಕರೆದು, ನಿಮ್ಮ ಊರಿನಲ್ಲಿ ನಾನು ಈ ದಿನ ಇ

ಲ್ಲವಷ್ಟೆ; ಅಲ್ಲಿ ಬೆಳಕು ಆಯಿತೋ? ಬೆಂಕಿ ಶಿಕ್ಕಿತೋ? ನೀವೆಲ್ಲಾ ಊಟಾ ಮಾಡಿದಿರಾ? ಎಂದು ಕೇಳಲಾಗಿ; ಅವನು ನಕ್ಕು, ಎಲೇ, ಹುಚ್ಚಳೇ, ಈ ಪ್ರಪಂಚವೆಲ್ಲಾ ನಿನ್ನ ಕುಂಪಟಿಯಿಂದಲೂ ಕೋಳಿಯಿಂದಲೂ ಇರುವದೇ? ನೀನು ಯಾಕೆ ಇಲ್ಲಿ ಉಪವಾಸವಾಗಿ ಸಾಯುತ್ತೀ? ಎದ್ದು, ಹೋಗು, ಎಂದು ಹೇಳಲಾಗಿ; ಅವಳು ಶಾನೆ ನಾಚಿಕೆ ಪಟ್ಟು, ಊರಿಗೆ ತಿರಿಗಿ ಹೋಗಿ, ಅಲ್ಲಿ ಇರುವವರೆಲ್ಲರು ತನ್ನಿಂದ ಬದುಕಿ ಇದ್ದಾರೆ ಎಂಬ ದುರಭಿಮಾನವನ್ನು ಬಿಟ್ಟು, ಸುಖವಾಗಿ ಇದ್ದಳು. ಹೀಗೆ ಸಮಸ್ತ ಜನರನ್ನು ಸಂರಕ್ಷಣೆ ಮಾಡುವ ಭಾರವನ್ನು ದೇವರು ವಹಿಸಿ ಇರಲಾಗಿ, ಬುದ್ಧಿಹೀನರಾದವರು—ತಮ್ಮಿಂದಲೇ ಸರ್ವರೂ ರಕ್ಷಿಸಲ್ಪಡುತ್ತಾರೆ; ತಮ್ಮನ್ನು ಬಿಟ್ಟರೆ, ಅವರಿಗೆ ಗತಿ ಇಲ್ಲ ಎಂದು, ಅಂದು ಕೊಳ್ಳುತ್ತಾರೆ.

## ೪೭. ಕಥೆ.

ಜುನೇ ಯಜಮಾನನನ್ನೂ ಔತಣಸ್ತನನ್ನೂ ಕುರಿತದ್ದು.

ಒಬ್ಬ ವಿದ್ವಾಂಸನು ಒಂದು ಪಟ್ಣಕ್ಕೆ ಹೋದಾಗ, ಆ ಸ್ಥಳದಲ್ಲಿ ದೇಶಾಂತರಿಗಳಿಗೆ ಔತಣ ಇಡುವ ಉದಾರ ಗುಣವುಳ್ಳ ಒಬ್ಬನನ್ನ ಕುರಿತು ಕೇಳಿದನು. ಅದರ ಮೇಲೆ ತನ್ನ ಹಳೇ ಬಟ್ಟೆಗಳೊಂದಿಗೆ ಅವನ ಹತ್ತರಕ್ಕೆ ಹೋಗಿ, ಕಾದು ಇದ್ದನು. ಆ ಉದಾರಿ ಅವನಿಗೆ ಏನು ಸಹಾಯ ಮಾಡದೆ ಇದ್ದನು; ಅದೂ ಅಲ್ಲದೆ ಕುಳ್ಳಿರುವದಕ್ಕೂ ಠಾವು ಕೊಡಲಿಲ್ಲ. ಆದದರಿಂದ ಆ ಅಕ್ಷರ ಜ್ಞಾನವುಳ್ಳವನು ವ್ಯಸನದೊಂದಿಗೆ ಹೋಗಿ, ಮರು ದಿವಸ ಬಂ

ದು, ಡಂಭವಾದ ವಸ್ತ್ರವನ್ನೂ ಎರವಾಗಿ ತೆಗೆದು, ಉಟ್ಟು ಕೊಂಡು, ಅಲ್ಲಿಗೆ ಮರಳಿ ಹೋದನು. ಅವನು ಇವನನ್ನು ಕಂಡ ಕೂಡಲೇ, ಮರ್ಯಾದೆ ಮಾಡಿ, ತನ್ನ ಹತ್ರದಲ್ಲಿ ಕುಳ್ಳಿರಿಸಿ, ಮಾತಾಡಿ ಕೊಂಡಿದ್ದು, ಬಳಿಕ ಬಂದವನೊಂದಿಗೆ ಭೋಜನಕ್ಕೆ ಕೂತು ಕೊಂಡನು. ಆಗ ಈ ವಿದ್ವಾಂಸನು ಒಂದು ತುತ್ತನ್ನು ಎತ್ತಿ, ತನ್ನ ವಸ್ತ್ರದ ಮೇಲೆ ಹಾಕಿದನು. ಅದನ್ನು ಮನೆಯುವನು ನೋಡಿ, ನೀನು ಯಾತಕ್ಕೆ ಹೀಗೆ ಮಾಡಿದಿ? ಅಂದನು. ಆಗ ಅವನು ಹೇಳಿದ್ದು, ನಾನು ನಿನ್ನೆ ಹಳೇ ಬಟ್ಟೆಗಳೊಂದಿಗೆ ಬಂದಾಗ, ನನಗೆ ಭೋಜನವು ಏನೂ ಶಿಕ್ಕಲಿಲ್ಲ; ಈಗ ಚಂದಾಗಿ ಉಟ್ಟು ಕೊಂಡು ಬಂದದ್ದರಿಂದ, ಇಗೋ, ಮೃಷ್ಟಾನ್ನ ಭೋಜನವು ಶಿಕ್ಕಿತು. ಆದ್ದರಿಂದ ಈ ಭೋಜನವು ನನ್ನ ಬಟ್ಟೆಗೆ ಅಲ್ಲದೆ, ನನಗೆ ಇಕ್ಕಿದ್ದಲ್ಲ ಎಂದು, ಪ್ರತ್ಯುತ್ತರ ಕೊಟ್ಟನು. ಆಗ ಆ ಮನೆಯುವನು ತನ್ನೊಳಗೆ ನಾಚಿಕೆ ಪಟ್ಟು, ಸಮಾಧಾನ ಹೇಳಿದನು.

## ೪೩. ಕಥೆ.

ಇಬ್ಬರು ವರ್ತಕರನ್ನೂ ನ್ಯಾಯಾಧಿಪತಿಯನ್ನೂ ಕುರಿತದ್ದು.

ಅವಂತೀ ಪಟ್ಟಣದಲ್ಲಿ ಇಬ್ಬರು ವರ್ತಕರು ಉಂಟು. ಅವರಲ್ಲಿ ಒಬ್ಬನ ಹೆಸರು ದುರ್ಬುದ್ಧಿ; ಮತ್ತೊಬ್ಬನ ಹೆಸರು ಸುಬುದ್ಧಿ. ಅವರಿಬ್ಬರು ದೇಶಾಂತರಕ್ಕೆ ಹೋಗಿ, ವಿಶೇಷವಾಗಿ ಹಣ ಸಂಪಾದಿಸಿ ಕೊಂಡು ಬಂದು, ಆ ಪಟ್ಣಕ್ಕೆ ಸಮೀಪವಾಗಿ ಒಂದು ಹುಣಿಸೆ ಮರದ ಕೆಳಗೆ ಯಾರಿಗೂ ತಿಳಿಯದ ಹಾಗೆ, ಆ ಧನವನ್ನು ಭೂಮಿಯಲ್ಲಿ ಹೂ

ಳಿಟ್ಟು, ತಮ್ಮ ತಮ್ಮ ಮನೆಗಳಿಗೆ ಹೋದರು. ಆ ಮೇಲೆ ಒಂದು ದಿನ ದುರ್ಬುದ್ಧಿ ಎಂಬವನು ತಾನು ಮಾತ್ರವೇ ಆ ವೃಕ್ಷದ ಕೆಳಕ್ಕೆ ರಹಸ್ಯವಾಗಿ ಹೋಗಿ, ಆ ಧನವೆಲ್ಲಾ ಅಗಿದು, ತೆಗೆದು ಕೊಂಡು, ತನ್ನ ಮನೆಗೆ ಹೋದನು. ಕೆಲವು ದಿವಸಗಳ ತರುವಾಯ ಅವರಿಬ್ಬರು ಕೂಡಾ ಆ ಗಿಡದ ಬಳಿಗೆ ಹೋಗಿ, ಅಗಿದು, ನೋಡಲಾಗಿ; ಅಲ್ಲಿ ತಾವು ಇರಿಸಿ ಇದ್ದ ಧನವು ಎಲ್ಲಾ ಇಲ್ಲದೆ ಹೋದದ್ದರಿಂದ, ದುರ್ಬುದ್ಧಿ ಸುಬುದ್ಧಿಯ ಕೈಯನ್ನು ಹಿಡಿದು, ಎಳೆಯುತ್ತಾ, ಈ ಧನವೆಲ್ಲಾ ನೀನು ರಹಸ್ಯವಾಗಿ ತೆಗೆದು ಕೊಂಡು ಹೋಗಿ, ಈಗ ಏನು ತಿಳಿಯದವನ ಹಾಗೆ ನನ್ನ ಸಂಗಡ, ಇಲ್ಲಿ ಇರುವ ಧನವು ಅಗಿದು ಕೊಂಡು ಹೋಗೋಣಾ, ಎಂದು ಬಂದು ಇದ್ದೀ; ನನ್ನ ಭಾಗಕ್ಕೆ ಬರತಕ್ಕ ವರಹಾಗಳು ಕೊಟ್ಟು, ಹೋಗು ಎಂದು ಆತನನ್ನು ತೊಂದರೆ ಮಾಡಲಾಗಿ; ಆತನು, ಇದು ನನಗೆ ತಿಳಿಯದು ಎಂದು, ಎಷ್ಟು ಹೇಳಿದಾಗ್ಯೂ, ಕೇಳದೆ, ಅವನನ್ನು ನ್ಯಾಯಾಧಿಪತಿಯ ಬಳಿಗೆ ಕರಕೊಂಡು ಹೋಗಿ, ನಾವಿಬ್ಬರು ಕೂಡಾ ಹೂಳಿಟ್ಟ ಧನವನ್ನು ನನಗೆ ತಿಳಿಸದೆ, ಸುಬುದ್ಧಿ ಒಬ್ಬನೇ ತಕ್ಕೊಂಡು ಹೋಗಿ ಇದ್ದಾನೆಂದೂ, ಆ ದ್ರವ್ಯದಲ್ಲಿ ತನಗೆ ಬರ ಬೇಕಾದ ಭಾಗವು ಕೊಡಿಸ ಬೇಕೆಂದೂ ಆತನೊಡನೆ ಫಿರ್ಯಾದೆ ಮಾಡಿದನು. ಆ ನ್ಯಾಯಾಧಿಪತಿಯು ದುರ್ಬುದ್ಧಿಯನ್ನು ನೋಡಿ, ನೀವಿಬ್ಬರು ಹೂಳಿಟ್ಟ ಧನವು ಸುಬುದ್ಧಿ ಒಬ್ಬನೇ ತಕ್ಕೊಂಡನೆಂದು ಹೇಳಿದೆಯಲ್ಲ? ಇದನ್ನು ಹ್ಯಾಗೆ ರುಜುವು ಮಾಡುತ್ತೀ? ಎಂದು ಕೇಳಲಾಗಿ; ನಾವು ಯಾವ ಮರದ ಕೆಳಗೆ ಹಣವನ್ನು ಹೂಳಿಟ್ಟು ಇದ್ದೆವೋ, ಆ ಮರದಿಂದಲೇ ರುಜು

ವು ಮಾಡಿಸುತ್ತೇನೆಂದು, ದುರ್ಬುದ್ಧಿ ಹೇಳಿದನು. ಆ ಬಳಿಕ ನ್ಯಾಯಾಧಿಪತಿಯು, ಆ ಪ್ರಕಾರವೇ ಆಗಲಿ; ನಾಳೆ ದಿನ ಆ ಮರದ ಕೆಳಗೆ ಬಂದು, ಈ ಸಂಗತಿ ವಿಚಾರಿಸುತ್ತೇನೆಂದು, ಹೇಳಿದನು. ಆ ಬಳಿಕ ದುರ್ಬುದ್ಧಿ ಎಂಬವನು ತನ್ನ ತಂದೆಯನ್ನು ಆ ರಾತ್ರಿಯೇ ತನ್ನ ಹಿಂದೆ ಇಟ್ಟು ಕೊಂಡು ಹೋಗಿ, ಆ ಮರದ ತೊರ್ರೆಯಲ್ಲಿ ಇಟ್ಟು, ನ್ಯಾಯಾಧಿಪತಿಯು ಈ ಮರದ ಕೆಳಗೆ ಬಂದು, ಕೇಳುವಾಗ, ಧನವೆಲ್ಲಾ ಸುಬುದ್ಧಿಯೇ ಎತ್ತಿ ಕೊಂಡು ಹೋದನೆಂದು ಹೇಳು, ಅಂದನು. ಆ ಮಾರಣೆ ದಿನ ನ್ಯಾಯಾಧಿಪತಿಯು ತನ್ನ ಪರಿವಾರದೊಡನೆ ಆ ಮರದ ಕೆಳಕ್ಕೆ ಬಂದು, ಇಲ್ಲಿ ಹೂಳಿಟ್ಟ ಧನವೆಲ್ಲಾ ಯಾರು ಎತ್ತಿ ಕೊಂಡು ಹೋದರೆಂದು, ಕೇಳಿದನು. ಅದಕ್ಕೆ ತೊರ್ರೆಯಲ್ಲಿ ಇದ್ದವನು ಆ ಧನವೆಲ್ಲಾ ಸುಬುದ್ಧಿ ಅಗಿದು ಕೊಂಡು, ಹೋದನೆಂದು, ಘಟ್ಟಿಯಾಗಿ ಹೇಳಿದನು. ಆ ಧ್ವನಿ ಕೇಳಿ, ಎಲ್ಲರೂ ಆಶ್ಚರ್ಯ ಪಟ್ಟು, ನಿಂತಿದ್ದರು. ಆಗ ನ್ಯಾಯಾಧಿಪತಿಯು ಸ್ವಲ್ಪ ಹೊತ್ತು ಆಲೋಚನೆ ಮಾಡಿ, ಆ ತೊರ್ರೆಯಲ್ಲಿ ಸ್ವಲ್ಪ ಹುಲ್ಲು ಹಾಕಿ, ಬೆಂಕಿಯನ್ನು ಇಡಿಸಿದನು. ಆ ಬಳಿಕ ಆ ತೊರ್ರೆಯಲ್ಲಿ ಇದ್ದವನು ಶ್ವಾಸ ಆಡದೆ, ಈಚೆಗೆ ಬಿದ್ದು, ಸತ್ತು ಹೋದನು. ಇದರಿಂದ ಆ ನ್ಯಾಯಾಧಿಪತಿಯು, ದುರ್ಬುದ್ಧಿ ಎಂಬವನು ಮಾಡಿದ ಕೃತ್ಯವನ್ನು ಕಂಡು, ಅವನೇ ಈ ಧನವೆಲ್ಲಾ ಅಪಹರಿಸಿದನೆಂದು, ನಿಶ್ಚಯಿಸಿ, ದುರ್ಬುದ್ಧಿ ತೆಗೆದು ಕೊಂಡು ಹೋದ ಧನವೆಲ್ಲಾ ತರಿಸಿ, ಸುಬುದ್ಧಿಗೆ ಕೊಡಿಸಿದನು. ಆ ದುರ್ಬುದ್ಧಿ ಧನವೆಲ್ಲಾ ಹೋಗಲಾಡಿಸಿ ಕೊಂಡು, ತಂದೆಯನ್ನು ನಾಶನಾ ಮಾಡಿ ಕೊಂಡು, ಬಹು ದುಃಖದಿಂದ ಮನೆಗೆ ಹೋದ

ನು. ಆದಕಾರಣ, ಒಬ್ಬರನ್ನು ಕೆಡಿಸ ಬೇಕೆಂದು, ಯಾರು ನೆನಸುತ್ತಾರೋ, ಅವರನ್ನು ದೇವರು ಕೆಡಿಸುತ್ತಾನೆ.

೪೪. ಕಥೆ.

ಇಬ್ಬರು ಸಹೋದರರನೂ್ನ ಒಬ್ಬ ಮುದಿಕಿಯನೂ್ನ ನ್ಯಾಯಾಧಿಪತಿಯನೂ್ನ ಕುರಿತದ್ದು.

ಮಧುರಾ ಪಟ್ಣದಲ್ಲಿ ಒಬ್ಬ ಬ್ರಾಹ್ಮಣನು ಇದ್ದನು. ಅವನಿಗೆ ಇಬ್ಬರು ಮಕ್ಕಳು. ಅವನು ತುಂಬಾ ದ್ರವ್ಯ ಸಂಪಾದಿಸಿ ಇಟ್ಟು, ಸತ್ತು ಹೋದನು. ಇವನ ಮಕ್ಕಳು ಇಬ್ಬರೂ ಆ ಧನವೆಲ್ಲಾ ಸರಿಯಾಗಿ ಹಂಚಿ ಕೊಂಡು, ತಮ್ಮಿಬ್ಬರಿಗೆ ಬಂದ ಭಾಗ ಒಂದು ಚೀಲದಲ್ಲಿ ಇಟ್ಟು ಮುದ್ರೆ ಹಾಕಿ, ತಮ್ಮ ಮನೆ ನೆರೆಯಲ್ಲಿ ಒಬ್ಬ ಮುದಿಕಿ ಇರಲು, ಆಕೆಯ ಕೈಗೆ ಆ ಚೀಲವನ್ನು ಕೊಟ್ಟು, ನಾವು ದಿವ್ಯ ದೇಶಕ್ಕೆ ಯಾತ್ರೆ ಹೋಗಿ ಬರುತ್ತೇವೆ. ಆ ವರಿಗೂ ಈ ಹಣವನ್ನು ನಿನ್ನ ಬಳೀಲಿ ಬಚ್ಚಿಟ್ಟು, ತಿರಿಗಿ ನಾವಿಬ್ಬರು ಬಂದು ಕೇಳಿದಾಗ, ಕೊಡು, ಎಂದು ಹೇಳಿ, ತೀರ್ಥ ಯಾತ್ರೆಗೆ ಹೊರಟರು. ಸ್ವಲ್ಪ ದೂರ ಹೋದ ಮೇಲೆ, ಚಿಕ್ಕವನು ಅಣ್ಣನನ್ನು ಮೋಸಾ ಮಾಡಿ, ಆ ಧನವೆಲ್ಲಾ ತಾನು ಒಬ್ಬನೇ ಅಪಹರಿಸ ಬೇಕೆಂದು ನೆನಸಿ, ಒಂದು ದಿನ ಅರ್ಧ ರಾತ್ರಿಯಲ್ಲಿ ಎದ್ದು, ಅಣ್ಣನ ಸಂಗಡ ಹೇಳದೆ, ಹೊರಟು, ತನ್ನ ಊರಿಗೆ ಬಂದು, ಆ ಮುದಿಕಿಯ ಬಳಿಗೆ ಹೋಗಿ, ನಾನು ನನ್ನ ಅಣ್ಣನು ಸಹಾ ತೀರ್ಥಯಾತ್ರೆ ಹೋಗುತ್ತಿರಲಾಗಿ, ದಾರಿಯಲ್ಲಿ ದೊಡ್ಡ ಹುಲಿ ನನ್ನ ಅಣ್ಣನನ್ನು ಕೊಂದು ಹಾಕಿತು; ಆದಕಾರಣ ನಾನು ಮಾತ್ರವೇ ಬಂದೆನು; ಆದ್ದರಿಂದ ನಾವಿಬ್ಬರು ನಿನ್ನ ವಶಕ್ಕೆ

ಕೊಟ್ಟ ಧನವು ಕೊಡು ಎಂದು, ಕೇಳಿದನು. ಅದಕ್ಕೆ ಆ ಮುದಿಕಿ ಅವನ ಕೈಗೆ ಧನವನ್ನು ಕೊಡುವದಕ್ಕೆ ಸ್ವಲ್ಪ ಹೊತ್ತು ಅನುಮಾನಿಸಿ, ಇವನು ಅಣ್ಣನನ್ನು ಮೋಸಾ ಮಾಡನೆಂದು ನಂಬಿ, ಆ ದ್ರವ್ಯವೆಲ್ಲಾ ಅವನ ಕೈಗೆ ಕೊಟ್ಟಳು. ಅವನು ಧನವನ್ನು ತೆಗೆದು ಕೊಂಡು, ಮತ್ತೊಂದು ದೇಶಕ್ಕೆ ಓಡಿ ಹೋಗಿ, ಸುಖವಾಗಿ ಇದ್ದನು. ಆ ಅಣ್ಣನಾದವನು ತನ್ನ ತಮ್ಮನನ್ನು ಕಾಣದೆ, ಬಹು ವ್ಯಸನ ಪಡುತ್ತಾ, ತಿರಿಗಿ ತನ್ನ ಊರಿಗೆ ಬಂದು, ಆ ಮುದಿಕಿಯ ಬಳಿಗೆ ಹೋಗಿ, ನನ್ನ ತಮ್ಮನು ಎಲ್ಲಿಗೆ ಹೋದನೋ, ತಿಳಿಯಲಿಲ್ಲ. ನಾವಿಬ್ಬರು ನಿನ್ನ ಕೈಗೆ ಕೊಟ್ಟಿದ್ದ ದ್ರವ್ಯವನ್ನು ಕೊಡು ಎಂದು, ಕೇಳಲಾಗಿ; ಆ ಮುದಿಕಿಯು ನಿನ್ನ ತಮ್ಮನು ಸ್ವಲ್ಪ ದಿನಗಳ ಮುಂಚೆ ಇಲ್ಲಿಗೆ ಬಂದು, ನೀನು ಸತ್ತು ಹೋದೆ ಎಂದು ಹೇಳಿ, ಹಣವೆಲ್ಲಾ ತೆಗೆದು ಕೊಂಡು ಹೋದನು ಎಂದು, ಹೇಳಿದಳು. ಆ ಮೇಲೆ ಅವನು ಆ ಮುದಿಕಿಯೊಡನೆ ವ್ಯಾಜ್ಯವಾಡುತ್ತಾ, ಅವಳನ್ನು ನ್ಯಾಯಾಧಿಪತಿಯು ಬಳಿಗೆ ಕರ ಕೊಂಡು ಹೋಗಿ, ತನ್ನ ಸಂಗತಿ ಎಲ್ಲಾ ಆತನೊಡನೆ ಹೇಳಲಾಗಿ; ನ್ಯಾಯಾಧಿಪತಿ ಈತನ ಮಾತುಗಳನ್ನೂ ಮುದಿಕಿಯ ಮಾತುಗಳನ್ನೂ ಸಹಾ ಕೇಳಿ, ಅವಳು ಮೋಸ ಹೋದಳೆಂದು ತಿಳು ಕೊಂಡು, ಆತನನ್ನು ಕರೆದು, ಮೊದಲು ಮುದಿಕಿಯು ಕೈಗೆ ದ್ರವ್ಯವನ್ನು ಕೊಡುವಾಗ, ನಾವಿಬ್ಬರು ಬಂದು ಕೇಳಿದರೆ, ಹಣ ನಮಗೆ ಕೊಡು, ಎಂದು ಹೇಳಿದಿರಿ; ಆದಕಾರಣ ನಿನ್ನ ತಮ್ಮನನ್ನು ಕರೆದು ಕೊಂಡು ಬಂದು, ಶೇರಿದರೆ, ನಿಮ್ಮ ಹಣವು ನಿಮಗೆ ಕೊಡಿಸುತ್ತೇವೆ; ಒಬ್ಬನೇ ಬಂದು ಕೇಳಿದರೆ,

ನಿನಗೆ ಹ್ಯಾಗೆ ಕೊಡಿಸಬಹುದು? ಎಂದು ಹೇಳಿ, ನಿನಗೆ ಬೇಕಾಗಿ ಇದ್ದರೆ, ನಿನ್ನ ತಮ್ಮನನ್ನು ಕರೆದು ಕೊಂಡು ಬಾ, ಎಂದು ಹೇಳಿದನು. ಅದಕ್ಕೆ ಆತನು ಏನೂ ಪ್ರತ್ಯುತ್ತರವನ್ನು ಹೇಳಲಾರದೆ, ಹೋದನು.

### ೪೫. ಕಥೆ.

ಇಬ್ಬರು ಲೋಭಿಗಳನ್ನು ಕುರಿತದ್ದು.

ಅರ್ಬಿಸ್ತಾನ್ ದೇಶದ ಕೂಫಾ ಪಟ್ಟಣದಲ್ಲಿ ಒಬ್ಬ ಲೋಭಿಯು, ಬಸೋರದಲ್ಲಿ ಲುಬ್ಧರೆಲ್ಲರಲ್ಲಿ ಯುಕ್ತಿಯುಳ್ಳವನು ಒಬ್ಬನು ವಸ್ತಿಯಾಗಿದ್ದಾನೆಂದು, ವರ್ತಮಾನ ಕೇಳಿ, ಅಲ್ಲಿಗೆ ಹೋಗಿ, ಆ ಮನುಷ್ಯನ ಹತ್ರ ಕಲಿತು ಕೊಳ್ಳಲಿಕ್ಕೆ ಆಲೋಚನೆ ಮಾಡಿ, ಹೊರಟು ಹೋದನು. ಆ ಪಟ್ಟಣದಲ್ಲಿ ಶೇರಿ, ಅವನ ಮನೆಗೆ ಹೋಗಿ, ನಾನು ನಿನ್ನ ಶಿಷ್ಯನಾಗುವೆನೆಂದು ಹೇಳಿದನು. ಆ ಬಸೋರದವನು, ನೀನು ಬಂದದ್ದು ಒಳ್ಳೇದು; ನನ್ನ ಸಂಗಡ ಬಜಾರಕ್ಕೆ ಜಿನಸಿನ ಕ್ರಯ ಮಾಡುವದಕ್ಕೆ ಬರ್ರಿ, ಅಂದನು. ಮೊದಲು ರೊಟ್ಟಿಗಾರನ ಹತ್ರಕ್ಕೆ ಹೋಗಿ, ನಿಮ್ಮ ಹತ್ರ ಒಳ್ಳೇ ರೊಟ್ಟಿ ಉಂಟೋ? ಎಂದು ಕೇಳಿದಾಗ; ಆ ರೊಟ್ಟಿಗಾರನು, ಧೊರೆಗಳೇ, ನಾನು ನಿಮ್ಮ ಚಾಕರಿಯುವನು; ಒಳ್ಳೇ ರೊಟ್ಟಿ ಉಂಟು; ಅದು ಬೆಣ್ಣೆಯ ಹಾಗೆ ಬಿಳುಪಾಗಿಯೂ ಮೃದುವಾಗಿಯೂ ಇರುತ್ತದೆ, ಅಂದನು. ಆ ಬಸೋರದವನು ಕೂಫಾದವನಿಗೆ ಹೇಳಿದ್ದು—ನೀವು ಕೇಳಿದಿರೋ? ಇವನು ತನ್ನ ರೊಟ್ಟಿ ಬೆಣ್ಣೆಯ ಹಾಗೆ ಉಂಟೆಂದು, ಹೇಳುತ್ತಾನೆ; ಆದಕಾರಣ ರೊ

ಟ್ಟಿಗಿಂತ ಬೆಣ್ಣೆ ಒಳ್ಳೇದೆಂದು, ಕಾಣುತ್ತದೆ; ಬೆಣ್ಣೆ ತ ಕೊಳ್ಳುವ. ಆ ಮೇಲೆ ಬೆಣ್ಣೆಗಾರನ ಹತ್ರ ಹೋಗಿ, ನಿಮ್ಮಲ್ಲಿ ಒಳ್ಳೇ ಬೆಣ್ಣೆ ಉಂಟೋ? ಎಂದು ಕೇಳಿದರು. ಅವನು, ನನ್ನಲ್ಲಿ ಉಂಟು; ನನ್ನ ಬೆಣ್ಣೆ ಎಣ್ಣೆಯ ಹಾಗೆ ಶುದ್ಧವಾಗಿಯೂ ಶೀಯಾಗಿಯೂ ಇದೆ, ಅಂದನು. ಈ ಮಾತು ಕೇಳಿ, ಬಸೋರದವನು ತನ್ನ ಶಿಷ್ಯನ ಸಂಗಡ, ಇವನ ಬೆಣ್ಣೆಯು ಎಣ್ಣೆಯ ಹಾಗೆ ಇದೆ, ಎಂದು ಹೇಳುವದರಿಂದ, ಎಣ್ಣೆಯೇ ಉತ್ತಮವೆಂದು, ತಿಳಿದು ಕೊಳ್ಳುತ್ತಿಯೋ? ಎಂದು ಕೇಳಿದನು. ಆಗ ಅವರು ಎಣ್ಣೆಗಾರನ ಹತ್ರ ಹೋಗಿ, ನಿಮ್ಮಲ್ಲಿ ಒಳ್ಳೇ ಎಣ್ಣೆ ಉಂಟೋ? ಎಂದು ಕೇಳಿದರು. ಅವನು, ಉಂಟು; ಅದು ನೀರಿನ ಹಾಗೆ ಬಿಳುಪಾಗಿಯೂ ನಿರ್ಮಲವಾಗಿಯೂ ಇರುತ್ತದೆ, ಎಂದು ಹೇಳಿದನು. ಆ ಬಸೋರದವನು ಹೇಳಿದ್ದು—ಓಹೋ! ನೀರು ಎಲ್ಲಕ್ಕಿಂತ ಉತ್ತಮವೆಂದು ಪ್ರತ್ಯಕ್ಷವಾಗಿದೆ; ನನ್ನ ಮನೆಯಲ್ಲಿ ನೀರು ತುಂಬಿದ ಪೀಪಾಯಿ ಉಂಟು; ಅದರಿಂದ ನಿಮಗೆ ಬೇಕಾದಷ್ಟು ಕುಡಿಯಲಿಕ್ಕೆ ಕೊಡುತ್ತೇನೆ. ಮನೆಗೆ ಬಂದ ಮೇಲೆ, ಅವನು ಇವನಿಗೆ, ರೊಟ್ಟಿಗಿಂತ ಬೆಣ್ಣೆ ಉತ್ತಮವಾದದ್ದು; ಬೆಣ್ಣೆಗಿಂತ ಎಣ್ಣೆ ಉತ್ತಮವಾದದ್ದು, ಎಣ್ಣೆಗಿಂತ ನೀರು ಉತ್ತಮವಾದದ್ದು ಎಂದು, ನೀರು ಹೊರ್ತು, ಏನೂ ಕೊಡಲಿಲ್ಲ. ಕೂಫಾದಿಂದ ಬಂದ ಲೋಭಿಯು, ಒಳ್ಳೇದು; ನಾನು ವ್ಯರ್ಥವಾಗಿ ಬರಲಿಲ್ಲ. ಬೇಕಾದಷ್ಟು ಕಲಿತು ಕೊಂಡೆನೆಂದು ಹೇಳಿ, ಹೊರಟನು.

## ೪೬. ಕಥೆ.

ಅರಸನನ್ನೂ ಅವನ ಮೂವರು ಕುಮಾರರನ್ನೂ ಕುರಿತದ್ದು.

ಚೋಳ ದೇಶದಲ್ಲಿ ದ್ವಿಜಕೀರ್ತಿ ಎಂಬ ಅರಸನಿಗೆ ಮೂವರು ಮಕ್ಕಳು ಇದ್ದರು. ಆತಗೆ ವೃದ್ಧಾಪ್ಯವು ಪ್ರಾಪ್ತವಾದ್ದರಿಂದ ರಾಜ್ಯವು ಪರಿಪಾಲನೆ ಮಾಡುವದಕ್ಕೆ ಶಕ್ತಿ ಇಲ್ಲದೆ, ತನ್ನ ಮೂವರು ಮಕ್ಕಳಲ್ಲಿ ಪ್ರಭುತ್ವವನ್ನು ಮಾಡ ತಕ್ಕವನಿಗೆ ರಾಜ್ಯ ಕೊಡ ಬೇಕು ಎಂದು, ಯೋಚನೆ ಮಾಡಿ, ಅವರವರ ಯೋಗ್ಯತೆಗಳು ತಿಳುಕೊಳ್ಳುವ ನಿಮಿತ್ಯ, ಮೊದಲಾಗಿ ಜ್ಯೇಷ್ಠ ಕುಮಾರನನ್ನು ಕರಿಸಿ, ನಿನ್ನ ಮನಸ್ಸಿನಲ್ಲಿ ಏನು ಅಪೇಕ್ಷೆ ಇಧೆ? ಹೇಳು, ಅನ್ನಲಾಗಿ; ನಾನು ಸದಾಕಾಲವು ತರ್ಕ ವ್ಯಾಕರಣಾಲಂಕಾರ ಶಾಸ್ತ್ರಗಳಲ್ಲಿ ಪ್ರವೀಣರಾದ ವಿದ್ವಾಂಸರನ್ನು ಇಟ್ಟು ಕೊಂಡು, ಶ್ರೇಷ್ಠವಾದ ಗ್ರಂಥಗಳ ದೆಶೆಯಿಂದ ಕಾಲಕ್ಷೇಪವನ್ನು ಮಾಡಿ ಕೊಂಡು, ಇರ ಬೇಕೆಂಬ ಅಪೇಕ್ಷೆ ತುಂಬಾ ಇಧೆ ಎಂದು, ಹೇಳಿದನು. ಆಗ ಅರಸು ಆತನಿಗೆ ಖರ್ಚಿಗೆ ತಕ್ಕಷ್ಟು ಕೊಟ್ಟು, ನಿನ್ನ ಇಚ್ಛೆಯ ಪ್ರಕಾರ ನಡಿಸಿಕೋ ಎಂದು ಹೇಳಿ, ಎರಡನೇ ಮಗನನ್ನು ಕರೇ ಕಳುಹಿಸಿ, ನಿನ್ನ ಅಭಿಪ್ರಾಯ ಯಾವ ಮೇರಿಗೆ ಇಧೆ? ಎಂದು ಕೇಳಲಾಗಿ; ವಿಸ್ತಾರವಾಗಿ ಹಣ ಸಂಪಾದಿಸಿ ಕೊಂಡು, ದೇಶಾಂತರಗಳಿಗೆ ಹೋಗ ಬೇಕೆಂಬ ಅಪೇಕ್ಷೆ ಇಧೆ ಎಂದು, ಹೇಳಿದನು. ಆಗ ಅರಸು ಆತನಿಗೆ ಬೇಕಾದಷ್ಟು ಧನವನ್ನು ಕೊಡಿಸಿ, ಕಳುಹಿಸಿದನು. ಮೂರನೇ ಮಗನನ್ನು ಕರಿಸಿ, ನಿನಗೆ ಏನು ಅಭಿಲಾಷೆ ಇಧೆ? ಎಂದು ಕೇಳಿದನು. ನಾನು ಒಂದು ರಾಜ್ಯ

ವನ್ನು ಸಂಪಾದಿಸಿ ಕೊಂಡು, ವಿಸ್ತಾರವಾಗಿ ಫಾಜು ಕೂಡಿಸಿ, ನನ್ನ ರಾಜ್ಯದಲ್ಲಿ ಇರುವ ಪ್ರಜೆಗಳನ್ನು ತುಂಬಾ ಆದರಿಸಿ, ಶೀಮೆ ಫಲ ಯಾವತ್ತು ಮಾಡಿ; ಸಮಸ್ತ ಜನರನ್ನು ಸಂರಕ್ಷಣೆ ಮಾಡಿ, ಕೀರ್ತಿ ಸಂಪಾದಿಸ ಬೇಕೆಂಬ ಅಪೇಕ್ಷೆ ಬಹಳವಾಗಿ ಇಧೆ ಎಂದು, ಹೇಳಿದನು. ಅರಸು ಆತನ ಮಾತುಗಳಿಗೆ ಬಹಳ ಸಂತೋಷ ಪಟ್ಟು, ರಾಜ್ಯಕ್ಕೆ ಈತನೇ ಅರ್ಹನೆಂದು ಯೋಚಿಸಿ, ತನ್ನ ರಾಜ್ಯವೆಲ್ಲಾ ಆತನ ವಶಾ ಮಾಡಿದನು. ಈ ಚಿಕ್ಕವನು ರಾಜ್ಯದ ಅಧಿಕಾರವನ್ನು ವಹಿಸಿ ಕೊಂಡು, ಪ್ರಜೆಗಳನ್ನು ನ್ಯಾಯವಾಗಿ ಪರಿಪಾಲಿಸುತ್ತಾ ಇದ್ದದರಿಂದ, ಶೀಮೆ ಸುಭಿಕ್ಷವಾಗಿ ಇತ್ತು. ಆದಕಾರಣ ಯಾರಿಗಾದರೂ ಅಧಿಕಾರಗಳನ್ನು ಕೊಡುವಲ್ಲಿ, ಯೋಗ್ಯತೆಗಳನ್ನು ವಿಚಾರಿಸಿ, ಕೊಡ ಬೇಕು.

## ೪೩. ಕಥೆ.

### ಅಗಸನನ್ನೂ ಅವನ ಕತ್ತೆಯನ್ನೂ ನಾಯಿಯನ್ನೂ ಕಳ್ಳರನ್ನೂ ಕುರಿತದ್ದು.

ವಾರಣಾಸಿಯಲ್ಲಿ ಒಬ್ಬ ಅಗಸನು ಇದ್ದನು. ಅವನ ಬಳಿಯ ಒಂದು ನಾಯಿ ಒಂದು ಕತ್ತೆ ಇರುವವು. ಒಂದು ದಿನ ರಾತ್ರಿ, ಅವರು ನಿದ್ರೆ ಹೋಗುವ ಸಮಯ ನೋಡಿ ಕೊಂಡಿದ್ದು, ಅವನ ಮನೆಯಲ್ಲಿ ಕಳ್ಳರು ಇಳೀಬಿದ್ದು; ಎಲ್ಲಾ ತೆಗೆದು ಕೊಂಡು ಹೋಗ ಬೇಕೆಂದು, ಕನ್ನವು ಹಾಕುತ್ತಾ ಇದ್ದರು. ಅಗ ಆ ನಾಯಿ ಅಲ್ಲಿ ಇಲ್ಲದ್ದರಿಂದ ಕತ್ತೆ ಕಳ್ಳರನ್ನು ನೋಡಿ, ನನ್ನ ಯಜಮಾ

ನನ ಮನೆಯಲ್ಲಿ ಕಳ್ಳರು ಇಳೀ ಬಿದ್ದು, ಎಲ್ಲಾ ದೋಚಿ ಕೊಂಡು ಹೋಗುತ್ತಾ ಇದ್ಧಾರೆ; ಈಗ ನಾಯಿ ಇಲ್ಲಿ ಇದ್ದರೆ, ಘಟ್ಟಿಯಾಗಿ ಬಗುಳಿ, ನಮ್ಮ ಧೊರೆಯನ್ನು ಎಬ್ಬಿಸುವದು; ಅದು ಯಾವಾಗ ಬರುವದೋ? ಏನೋ? ತಿಳಿಯದು; ಆ ವರಿಗೂ ನಾನು ಸುಮ್ಮನೆ ಇದ್ದರೆ, ಈ ತನ ಮನೆಯ ವಸ್ತುವುಗಳೆಲ್ಲಾ ದೋಪು ಹೋಗುತ್ತದೆ. ಇಂಥಾ ವೇಳೆಯಲ್ಲಿ ಸ್ವಾಮಿಯ ಕಾರ್ಯಕ್ಕೆ ಉಪೇಕ್ಷೆ ಮಾಡ ಬಾರದು; ನಾನೇ ಕೂಗಿ, ಆತನನ್ನು ಎಬ್ಬಿಸ ಬೇಕೆಂದು ನೆನಸಿ, ಘಟ್ಟಿಯಾಗಿ ಕೂಗಿತು. ಆಗ ಅಗಸನು ಕತ್ತೆಯ ಕೂಗು ಕೇಳಿ, ನಿದ್ರೆ ಭಂಗ ಮಾಡಿತಲ್ಲಾ? ಎಂದು, ಬಹಳ ಕೋಪದಿಂದ ಎದ್ದು, ಒಂದು ಕಟ್ಟಿಗೆ ತೆಗೆದು ಕೊಂಡು, ಅದನ್ನ ಚನ್ನಾಗಿ ಹೊಡೆದು, ತಿರಿಗಿ ಹೋಗಿ, ಮಲಗಿ, ನಿದ್ರೆ ಮಾಡುತ್ತಿರಲಾಗಿ; ಕಳ್ಳರು ಮನೆಯಲ್ಲಿ ಹೊಕ್ಕು, ಕದಿಯುತ್ತಾ ಇದ್ದರು. ಆಗ ನಾಯಿ ಬಂದದರಿಂದ ಕತ್ತೆ ಅದನ್ನು ನೋಡಿ, ನಮ್ಮ ಯಜಮಾನನ ಮನೆಗೆ ಕಳ್ಳರು ಕನ್ನವನ್ನು ಹಾಕುತ್ತಾ ಇದ್ದರು; ಆಗ ನೀನು ಇಲ್ಲಿ ಇಲ್ಲದಕಾರಣ, ಆ ಸಂಗತಿ ಆತನಿಗೆ ತಿಳಿಯ ಮಾಡ ಬೇಕೆಂದು, ನಾನು ಕೂಗಿದೆನು. ದುರ್ಮಾರ್ಗದಿಂದ ನಾನು ಕೂಗಿದೆನೆಂದು, ಆತನು ಎದ್ದು, ನನ್ನನ್ನು ಹೊಡೆದು, ಹೋದನು. ಈಗಲಾದರೂ ನೀನು ಬಗುಳಿ, ಆತನಿಗೆ ಈ ಸಂಗತಿ ತಿಳಿಯ ಮಾಡು, ಎಂದು ಹೇಳಲಾಗಿ, ಆ ನಾಯಿ ಘಟ್ಟಿಯಾಗಿ ಬಗುಳಿತು. ಆಗ ಅಗಸನು ನಾಯಿ ಬಗುಳುವದನ್ನು ಕೇಳಿ, ತನ್ನ ಮನೆಗೆ ಕಳ್ಳರು ಬಂದಿದ್ಧಾರೋ? ಏನೋ? ಎಂದು ಅಂದು ಕೊಂಡು, ಧಿಗ್ಗನೆ ಎದ್ದು, ಮನೆಯ ನಾಲ್ಕು ಕಡೆಯಲ್ಲಿಯೂ

ನೋಡಲು, ಅದು ವರಿಗೂ ಕಳ್ಳರು ಸಮಸ್ತವು ದೋಚಿ ಕೊಂಡು ಹೋದರು. ಆದಕಾರಣ ಬಹು ವ್ಯಸನ ಪಟ್ಟನು. ಆದದರಿಂದ ಒಬ್ಬನು ಮಾಡುವ ಕೆಲಸ ಮತ್ತೊಬ್ಬರು ಮಾಡಿದರೆ, ಕೆಲಸ ಮಾಡಿದವರಿಗೂ ಮಾತು ಬರುತ್ತದೆ; ಕೆಲಸವು ಕೆಟ್ಟು ಹೋಗುವದು.

## ೪೮. ಕಥೆ.

ಅರಸನನ್ನೂ ಕೀರ್ತಿ ಅಪೇಕ್ಷಿಸಿದ ಅವನ ಮಗನನ್ನೂ ಕುರಿತದ್ದು.

ಪಾಂಚಾಲ ದೇಶದಲ್ಲಿ ಒಬ್ಬ ಅರಸನು ಇದ್ದನು. ಆತನಿಗೆ ಒಬ್ಬ ಮಗನು. ಆ ಮಗನು ಚಿಕ್ಕಂದಿನಿಂದ ಬಹು ಬುದ್ಧಿವಂತನಾಗಿರುವನು. ಒಂದು ದಿವಸ ಅವನು ಅರಸನನ್ನೂ ನೋಡಿ, ಅಯ್ಯಾ, ಕೀರ್ತಿ ಸಂಪಾದಿಸಬೇಕೆಂದು ನನಗೆ ತುಂಬಾ ಅಪೇಕ್ಷೆ ಇಧೆ; ನಾನು ಯಾವ ಮೇರಿಗೆ ನಡೆದು ಕೊಂಡರೆ, ಕೀರ್ತಿ ಬಂದೀತೆಂದು, ಕೇಳಲಾಗಿ; ಅರಸನು ಹೇಳಿದ್ದು ಏನಂದರೆ— ನೀನು ರಾಜ್ಯ ಪರಿಪಾಲನೆ ಮಾಡುವ ಕಾಲದಲ್ಲಿ ಪ್ರಜೆಗಳಿಗೆ ತೊಂದರೆ ಕೊಡದೆ, ಭಾಗ್ಯವಂತರನ್ನೂ ದರಿದ್ರರನ್ನೂ ಚನ್ನಾಗಿ ವಿಚಾರಿಸಿ, ದರಿದ್ರರಾದವರಿಗೆ ಆಗಾಗ್ಯೆ ಅನ್ನ ವಸ್ತ್ರಗಳನ್ನು ಕೊಟ್ಟು, ಸಂರಕ್ಷಣೆ ಮಾಡುತ್ತಾ ಇದ್ದರೆ, ನಿನಗೆ ಕೀರ್ತಿ ಉಂಟಾಗುವದು; ಭಾಗ್ಯವಂತರಾದವರಿಗೆ ಎಷ್ಟು ಕೊಟ್ಟಾಗ್ಯೂ, ಕೀರ್ತಿ ಬಾರದು. ಇದಕ್ಕೆ ಒಂದು ದೃಷ್ಟಾಂತವನ್ನು ಹೇಳುತ್ತೇನೆ;— ನೀರು ಇಲ್ಲದೆ, ಪೈರು ಒಣಗಿ ಹೋಗುತ್ತಿರುವಾಗ, ಮಳೆ ಸುರಿದರೆ, ಮೇಘಕ್ಕೆ ಕೀರ್ತಿ ಉಂಟಾಗುವದು; ಸಮುದ್ರದಲ್ಲಿ ಎಷ್ಟು ಮಳೆ

ಸುರಿದಾಗ್ಯೂ, ಕೀರ್ತಿ ಬರಲಾರದು ಎಂದು ಹೇಳಿ, ಆಗ ಇವನು ಬಹಳ ಬುದ್ಧಿವಂತನೆಂದು ನೆನಸಿ, ತನ್ನ ರಾಜ್ಯ ದಲ್ಲಿ ಅರ್ಧ ರಾಜ್ಯ ಅವನ ವಶಾ ಮಾಡಿದನು. ತರುವಾ ಯ ಆ ಹುಡುಗನು ರಾಜ್ಯ ಸ್ವಾಧೀನಾ ಮಾಡಿ ಕೊಂಡು, ಪ್ರಜೆಗಳಿಗೆ ಕೊಟ್ಟ ಕೌಲು ಕರಾರು ನಡಿಸುತ್ತಾ, ದರಿದ್ರ ರಾದವರನ್ನು ವಿಚಾರಿಸಿ, ಅವರಿಗೆ ಅನ್ನ ವಸ್ತ್ರಗಳನ್ನು ಕೊಡಿಸಿ, ತುಂಬಾ ಆದರಿಸುತ್ತಾ ಇದ್ದನು. ಆದದರಿಂದ ಆತನಿಗೆ ಮಹಾ ಯಶಸ್ಸು ಉಂಟಾಯಿತು.

## ೪೯. ಕಥೆ.

### ಅರಸನನೂ ಋಷೀಶ್ವರನನೂ ಕುರಿತದ್ದು.

ಗಂಧಾರ ದೇಶದೊಳಗೆ ಮಹಾವೀರನೆಂಬ ಅರಸು ಬಹು ದ್ರವ್ಯ ಖರ್ಚು ಮಾಡಿ, ಎರಡು ತಾಳೇ ಮರದ ಉದ್ದ ಆಳವೂ, ಒಂದು ಯೋಜನ ಅಗಲವೂ ಉಳ್ಳ ಒಂದು ಕೆರೆ ಕಟ್ಟಿಸಿ, ಆ ಕೆರೆಯ ಸುತ್ತು ಮುತ್ತು ಗಟ್ಟು ಹಾಕಿಸಿದನು. ಎಷ್ಟು ಮಳೆ ಸುರಿದಾಗ್ಯೂ, ಎಷ್ಟು ನೀರು ಬಂದಾಗ್ಯೂ, ಆ ಕೆರೆ ಒಣಗಿ ಹೋಗುವದೇ ಹೊ ರ್ತು, ಎಷ್ಟು ಮಾತ್ರವೂ ನೀರು ನಿಂತು ಇರುವದಿಲ್ಲ. ಆದಕಾರಣ ಅರಸು ಒಂದು ದಿವಸ, ಬಹಳ ಹಣ ವ್ರ ಯ ಮಾಡಿದ ಕೆರೆಯಲ್ಲಿ ನೀರು ಇಲ್ಲದೆ ಹೋಯಿತಲ್ಲಾ? ಎಂದು, ಕೆರೆಯ ಕಟ್ಟೆಯ ಮೇಲೆ ಕೂತು ಕೊಂಡು, ಬಹು ಯೋಚನೆ ಮಾಡುತ್ತಾ ಇರುವ ಸಮಯದಲ್ಲಿ ಅಲ್ಲಿಗೆ ಏರಂಡ ಮುನಿ ಎಂಬ ಒಬ್ಬ ಋಷೀಶ್ವರನು ಬಂ ದನು. ಅರಸು ಎದ್ದು, ಆ ಋಷೀಶ್ವರನಿಗೆ ಸಾಷ್ಟಾಂಗ

ಸಮುಸ್ಕಾರವನ್ನು ಮಾಡಿ, ಆತನನ್ನು ಕುಳ್ಳಿರಿಸಿ ಕೊಂಡು, ಮಾತನಾಡುತ್ತಿರಲಾಗಿ; ಆ ಋಷೀಶ್ವರನು ಆ ಅರಸನನ್ನು ನೋಡಿ; ಓ ಅರಸೇ, ನೀನು ಏನೋ ಬಹಳ ಯೋಚನೆಯಿಂದ ಇರುವ ಹಾಗೆ ಕಾಣಿಸುತ್ತೀ; ಅದೇನು ನಿಮಿತ್ಯವೆಂದು, ಕೇಳಲಾಗಿ; ಸ್ವಾಮೀ, ನಾನು ಬಹಳ ದ್ರವ್ಯವನ್ನು ವ್ರಯು ಮಾಡಿ, ಈ ಕೆರೆಯನ್ನು ಕಟ್ಟಿಸಿದೆನು; ಇದರಲ್ಲಿ ಒಂದು ತೊಟ್ಟಾದರೂ ನೀರು ನಿಲ್ಲುವದಿಲ್ಲ. ಆದದರಿಂದ ಯೋಚನೆ ಮಾಡುತ್ತೇನೆ ಎಂದು ಹೇಳಲಾಗಿ; ಇದಕ್ಕೆ ಯೋಚನೆ ಮಾಡುವದು ಯಾಕೆ? ಸಾಹಸ ವಿತರಣಾದಿ ಗುಣ ಸಂಪನ್ನನಾದವನ ಕಂಠ ರಕ್ತದಲ್ಯಾದರೂ, ಒಬ್ಬ ಅರಸನ ಕಂಠ ರಕ್ತದಲ್ಯಾದರೂ ಕಲಿಸಿದ ಅನ್ನವು ಈ ಕೆರೆಗೆ ಸಮೀಪವಾಗಿ ಇರುವ ಶಕ್ತಿಗೆ ಬಲಿ ಕೊಟ್ಟರೆ, ಈ ಕೆರೆ ಬಣಗಿ ಹೋಗದೆ, ಸಮುದ್ರದ ಹಾಗೆ ಇರುವದು, ಎಂದು ಹೇಳಲಾಗಿ; ಆ ಅರಸು ಕೇಳಿ, ಅಂಥಾವರು ದೊರಕುವದು ಕಷ್ಟ; ಈ ಋಷೀಶ್ವರನು ಸಕಲ ಯೋಗ ಸಂಪನ್ನನಾಗಿ ಇದ್ಧಾನೆ; ಆದಕಾರಣ ಈತನನ್ನು ಈ ದುರ್ಗಿಗೆ ಬಲಿ ಕೊಡ ಬೇಕೆಂದು ನೆನಸಿ, ತನ್ನ ಚಂದ್ರಹಾಸವನ್ನು ಹಿರಿದು ಕೊಂಡು, ಆ ಋಷಿಯ ಶಿರಸ್ಸನ್ನು ಖಂಡ್ರಿಸಿದನು. ಆದಕಾರಣ ಪ್ರಭುವುಗಳಿಗೆ ಹಿತಾ-ಹಿತಗಳು ಹೇಳುವವನು ಕಾಲೋಚಿತವಾಗಿ ಹೇಳ ಬೇಕು. ಇಲ್ಲದಿದ್ದರೆ, ಹೇಳಿದವನಿಗೆ ಅಪಾಯುವು ಬರುವದು.

## ೫೦. ಕಥೆ.

ಅರಸನನೂ ಅವನ ಜಟ್ಟಿಯನೂ ಕುರಿತದ್ದು.

ಮಳಯಾಳ ದೇಶದಲ್ಲಿ ಸಂದನೆಂಬ ಅರಸು, ಪ್ರಭುತ್ವವನ್ನು ಮಾಡುತ್ತಿರಲಾಗಿ; ಒಂದು ದಿನ ಆತನ ಬಳಿಗೆ ಒಬ್ಬ ಜಟ್ಟಿ ಬಂದು, ಅರಸೇ, ನಾನು ಸಾಮು ಮೊದಲಾದ ವಿದ್ಯಗಳಲ್ಲಿ ತುಂಬಾ ಪರಿಶ್ರಮ ಮಾಡಿ ಇದ್ದೇನೆ; ದೊಡ್ಡ ಹುಲಿಗಳ ಸಂಗಡ ಗುದ್ದ್ಯಾಡ ಬಲ್ಲೆನು; ಪರ್ವತ ಆದಾಗ್ಯೂ, ತಲೆಯ ಮೇಲೆ ಹೊತ್ತು ಕೊಂಡು ಹೋಗುವೆನು; ನನ್ನ ಸಾಮರ್ಥ್ಯಕ್ಕೆ ತಕ್ಕ ಸಂಬಳ ಕೊಟ್ಟು, ನನ್ನ ಸಂರಕ್ಷಣೆ ಮಾಡುವಂಥಾವರು ತಮ್ಮನ್ನ ವಿನಹಾ, ಬೇರೆ ಯಾರೂ ನನಗೆ ಕಾಣಿಸಲಿಲ್ಲಾ. ಆದಕಾರಣ ತಮ್ಮ ಆಸರೆಯು ಸಂಪಾದಿಸಿ ಕೊಂಡು, ಜೀವನಾ ಮಾಡ ಬೇಕೆಂದು, ತಮ್ಮ ಸನ್ನಿಧಾನಕ್ಕೆ ಬಂದಿದ್ದೇನೆಂದು, ಅರಿಕೆ ಮಾಡಿ ಕೊಂಡನು. ಆಗ ಆ ಅರಸು ಅವನ ಮಾತುಗಳನ್ನು ಕೇಳಿ, ಇಂಥಾ ಭಂಟನು ನಮ್ಮ ಬಳಿಯ ಇದ್ದರೆ, ಒಳ್ಳೇದೆಂದು, ಯೋಚನೆ ಮಾಡಿ, ಅವನಿಗೆ ತಿಂಗಳಿಗೆ ಸಂಬಳ ನೂರು ವರಹಾ ನಿಷ್ಕರ್ಷೆ ಮಾಡಿ, ತನ್ನ ಬಳಿಯ ಇಟ್ಟು ಕೊಂಡನು. ಹೀಗೆ ಇರುವಾಗ್ಯೆ, ಆ ಪಟ್ಣಕ್ಕೆ ಸಮೀಪದಲ್ಲಿ ಇರುವ ಒಂದು ಬೆಟ್ಟದ ಮೇಲೆ ದುಷ್ಟ ಮೃಗಗಳು ಕೂಡಿ ಕೊಂಡು, ಪ್ರಜೆಗಳನ್ನು ಬಹಳ ಶ್ರಮೆ ಪಡಿಸುತ್ತಾ ಇತ್ತು. ಆದಕಾರಣ ಅರಸು ಆ ಜಟ್ಟಿಯನ್ನು ಕರಿಸಿ, ನೀನು ಬೆಟ್ಟಗಳ ಹೊರುವೆನೆಂದು ಹೇಳಿದಿಯಲ್ಲ? ಈಗ ಈ ಊರಿನ ಬಳಿಯ ಬೆಟ್ಟ ಇರುವದರಿಂದ ಪ್ರಜೆಗಳಿಗೆ ಬಹಳವಾಗಿ ಉಪದ್ರ ಉಂ

ಟಾಗಿ ಇದೆ. ಆ ಬೆಟ್ಟವನ್ನು ದೂರವಾಗಿ ಎಲ್ಲಿಗಾದರೂ ತಕ್ಕೊಂಡು ಹೋಗಿ, ಇರಿಸಿ ಬಾ ಎಂದು, ಎಲ್ಲಾ ಜನರ ಮುಂದೆ ಹೇಳಲು; ಅವನು, ಒಳ್ಳೇದು; ಅದೇ ಪ್ರಕಾರ ವೇ ಮಾಡುತ್ತೇನೆಂದು, ಹೇಳಿದನು. ಅಪ್ಪರ ಮೇಲೆ, ಮಾರಣೆ ದಿವಸದ ಬೆಳಿಗ್ಯೆ, ಆ ಅರಸು ಜಟ್ಟಿಯನ್ನು ಹಿಂ ದೆ ಇಟ್ಟು ಕೊಂಡು, ಮಂತ್ರಿ ಪುರೋಹಿತ ಸೇನಾ ಸಮೇ ತನಾಗಿ ಆ ಬೆಟ್ಟದ ಬಳಿಗೆ ಹೋದನು. ಆಗ ಜಟ್ಟಿಯು ನಡುಕಟ್ಟನ್ನು ಬಿಗಿಸಿ, ತಲೆಗೆ ಬಟ್ಟೆ ಸುತ್ತಿ ಕೊಂಡು, ನಿಂತು ಇರಲು; ಅರಸು ಅವನನ್ನು ನೋಡಿ, ಅನುಮಾನಿ ಸುವದು ಯಾಕೆ? ಬೆಟ್ಟವನ್ನು ತಲೆಯ ಮೇಲಕ್ಕೆ ಎತ್ತಿ ಕೊಂಡು ಹೋಗೆಂದು, ಹೇಳಲು; ಅಯ್ಯಾ, ನಾನು ಬೆಟ್ಟ ವನ್ನು ಹೊತ್ತು ಕೊಂಡು ಹೋಗುತ್ತೇನೆಂದು, ತಮ್ಮ ಸಂಗಡ ಅರಿಕೆ ಮಾಡಿ ಕೊಂಡೆನಲ್ಲದೆ, ಎತ್ತಿ ಕೊಂಡು ಹೋಗುತ್ತೇನೆಂದು, ಅರಿಕೆ ಮಾಡಿ ಕೊಳ್ಳಲಿಲ್ಲ; ಆದದರಿಂ ದ ಆ ಪರ್ವತವನ್ನು ಪೆಳ್ಳಗಿಸಿ, ನನ್ನ ತಲೆಯ ಮೇಲಕ್ಕೆ ಎತ್ತುವಂತೆ, ತಮ್ಮ ಸೇನಾ ಜನರಿಗೆ ಆಜ್ಞೆ ಮಾಡಿರಿ; ಅ ವರು ಬೆಟ್ಟವನ್ನು ನನ್ನ ತಲೆಯ ಮೇಲೆ ಇರಿಸಿದ ತರು ವಾಯ, ನೀವು ಎಲ್ಲಿಗೆ ಹೊತ್ತು ಕೊಂಡು ಹೋಗಿ, ಹಾ ಕಿ ಬಾ, ಎಂದು ಹೇಳಿದರೆ, ಅಲ್ಲಿ ಹಾಕಿ ಬರುತ್ತೇನೆಂದು, ಹೇಳಿದನು.

## ೫೧. ಕಥೆ.

ಅರಸನನ್ನೂ ಪಾಳ್ಯಗಾರನನ್ನೂ ಮಂತ್ರಿಯನ್ನೂ ಕುರಿತದ್ದು.

ಬಂಗಾಳ ದೇಶದಲ್ಲಿ ಒಬ್ಬ ಅರಸು ಇದ್ದನು. ಆತ ನು ದೊಡ್ಡ ಕೋಟೆ ಕಟ್ಟಿಸಿ ಕೊಂಡು, ವಿಸ್ತಾರವಾದ

ದಂಡಿನಿಂದ ಕೋಟೆಯಲ್ಲೇ ಇರುವನು. ಆತನ ಮೇಲೆ ಎಷ್ಟು ಬಲವಂತರಾದ ಶತ್ರುಗಳು ಯುದ್ಧಕ್ಕೆ ಬಂದಾಗ್ಯೂ, ಆತನು ಕೋಟೆಯಲ್ಲೇ ಇರುವನು; ಮತ್ತು ಯುದ್ಧವು ಸಮೀಪಿಸಿದಲ್ಲಿ ಕೋಟೆಯ ಮೇಲೆ ಯುದ್ಧವನ್ನು ಮಾಡುವನು; ಆತನ್ನ ಯಾರೂ ಜಯಿಸಲಾರದೆ ಹೋದರು. ಹೀಗೆ ಇರುವಲ್ಲಿ, ಆ ಅರಸಿಗೆ ಪಗದೀ ಕೊಡುವ ಪಾಳ್ಯಗಾರನೊಬ್ಬನು, ಏನಾದರೂ ಒಂದು ಉಪಾಯದಿಂದ ಅರಸನ್ನ ಕೋಟೆಯಿಂದ ಹೊರಗೆ ಬರುವ ಹಾಗೆ ಮಾಡಿ, ಆತನ್ನ ಹಿಡು ಕೊಂಡು, ಕ್ಶೈದಿನಲ್ಲಿಟ್ಟು, ಆತನ ರಾಜ್ಯವೆಲ್ಲಾ ತಾನು ಆಕ್ರಮಿಸಿ ಕೊಳ್ಳಬೇಕೆಂದು, ಯೋಚನೆ ಮಾಡಿ, ಒಂದು ದಿವಸ ಅರಸನ ಬಳಿಗೆ ಹೋಗಿ; ಅಯ್ಯಾ, ನನ್ನ ಕುಮಾರನಿಗೆ ನಾಳೆ ದಿವಸ ವಿವಾಹ ಆಗುತ್ತದೆ, ತಾವು ನನ್ನ ಮೇಲೆ ದಯವಿಟ್ಟು, ನನ್ನ ಮನೆಗೆ ಬಂದು, ಶುಭ ಮುಹೂರ್ತವನ್ನು ನೋಡಿ, ಬರ ಬಹುದೆಂದು ಪ್ರಾರ್ಥಿಸಲು; ಒಳ್ಳೇದು; ಬರುತ್ತೇನೆಂದು, ಹೇಳಿದನು. ಅಷ್ಟರಲ್ಲಿ ಆ ಅರಸಿನ ಮಂತ್ರಿಯು ಈ ಸಮಾಚಾರವನ್ನು ಕೇಳಿ, ಅರಸಿನ ಬಳಿಗೆ ಬಂದು; ಅಯ್ಯಾ, ತಾವು ಪಾಳ್ಯಗಾರನ ಮನೆಗೆ ಹೋಗ ಬೇಕೆಂದು ಇದ್ದೀರಂತೆ; ಅವನು ಬಹಳ ಕೃತ್ರಿಮದ ಮನುಷ್ಯನು, ವಿಶೇಷವಾಗಿ ಸೈನ್ಯವುಳ್ಳವನು; ತಾವು ಅವನ ಮನೆಗೆ ಹೋಗ ಬಾರದೆಂದು, ಅರಿಕೆ ಮಾಡಲಾಗಿ; ಅರಸು ಮಂತ್ರಿಯನ್ನು ನೋಡಿ; ಓ ಮಂತ್ರಿಯೇ, ಅವನು ಕೃತ್ರಿಮದ ಮನುಷ್ಯನಾದರೆ, ನಮಗೆ ಏನು? ಅವನು ನಮಗೆ ಬಹಳ ಆಪ್ತನಾಗಿ ಇದ್ದಾನೆ ಹೊರ್ತು, ಇದು ವರಿಗೂ ನಮ್ಮ ಮೇಲೆ ಏನೂ ಕೃತ್ರಿ

ಮಗಳನ್ನು ನಡಿಸಲಿಲ್ಲ; ಆದದರಿಂದ ಈಗಲೂ ಅವನು ಕೃತ್ರಿಮ ಮಾಡನು. ಅಂಥಾ ನೆನಪುಗಳು ಅವನಿಗೆ ಇದ್ದ ಹಾಗಾದರೆ, ನಾವು ಕೋಟೆಯಲ್ಲಿ ಇರುವಾಗಲೇ ಯಾತಕ್ಕೆ ನಮ್ಮ ಮೇಲೆ ಕೃತ್ರಿಯ ನಡಿಸನೆಂದು, ಹೇಳಲು; ಮಂತ್ರಿಯು, ಅಯ್ಯಾ, ತಾವು ಕೋಟೆಯಲ್ಲಿ ಇರುವ ವರಿಗೂ ಅವನು ತಮ್ಮ ಸಂಗಡ ಯುದ್ಧವನ್ನು ಮಾಡಿ, ಜಯಿಸಲಾರನು; ಆದದರಿಂದ ತಮ್ಮ ಸ್ನೇಹವನ್ನು ಕೋರಿ ಇರುತ್ತಾನೆ; ತಾವು ಕೋಟೆಯನ್ನು ಬಿಟ್ಟು, ಅವನ ಮನೆಗೆ ಹೋದ ವೇಳೆಯಲ್ಲಿ ಪರಾಧೀನರಾಗಿ ಇರುತ್ತೀರಿ; ಆದಕಾರಣ ಆತನು ತಮ್ಮ ಮೇಲೆ ಶತೃತ್ವವನ್ನು ತೋರಿಸುವನು ಅಲ್ಲದೆ, ಈಗಿನ ಹಾಗೆ ಮಿತ್ರನಾಗಿ ಇರನು. ಅದು ಹ್ಯಾಗಂದರೆ, ಕಮಲಗಳಿಗೆ ಸೂರ್ಯನು ಮಿತ್ರನೇ ಅಲ್ಲವೇ? ನೀರಿನಲ್ಲಿರುವ ಮಟ್ಟಿಗೂ ಸೂರ್ಯನು ಎಷ್ಟು ತೀಕ್ಷ್ಣವುಳ್ಳವನಾದಾಗ್ಯೂ, ಬಹಳ ಕೋಮಲವಾಗಿಯೂ, ವಿಕಸಿತವಾಗಿಯೂ ಇರುವಂತೆ ಮಾಡುತ್ತಾನೆ. ಆದರೆ ಅದೇ ಕಮಲಗಳನ್ನು ನೀರಿನಿಂದ ತೆಗೆದು, ಬೈಲಿಗೆ ಹಾಕಿದರೆ, ಆಗ ಆ ಸೂರ್ಯನೇ ಅವುಗಳನ್ನು ಬಾಡಿ ಹೋಗುವ ಹಾಗೆ ಮಾಡುತ್ತಾನೆ. ಆದದರಿಂದ ತಾವು ಅವನ ಮನೆಗೆ ಹೋಗ ಬಾರದೆಂದು, ಮಂತ್ರಿ ಹೇಳಲು; ಅರಸು, ಯುಕ್ತವೆಂದು ಗ್ರಹಿಸಿ, ಸಂತೋಷ ಪಟ್ಟು, ಪಾಳ್ಯಗಾರನ ಮನೆಗೆ ಹೊರಟು ಹೋಗದೆ, ನಿಂತನು.

## ೫೧. ಕಥೆ.

### ಕಾಗಿಯನ್ನೂ ನವಿಲುಗಳನ್ನೂ ಕುರಿತದ್ದು.

ಬೃಂದಾವನದಲ್ಲಿ ಒಂದು ಅಶ್ವತ್ಥ ವೃಕ್ಷದ ಮೇಲೆ ಅನೇಕ ವಾಯುಸ್ಸುಗಳು ಗೂಡುಗಳು ಕಟ್ಟಿ ಕೊಂಡು, ಅವುಗಳಲ್ಲಿ ತಮ್ಮ ಮರಿಗಳ ಕೂಡಾ ಸುಖದಿಂದ ವಾಸಾ ಮಾಡುತ್ತಾ ಇದ್ದವು. ಅಲ್ಲಿಗೆ ಸಮೀಪವಾಗಿ, ಒಂದು ಆಲದ ಮರದ ಮೇಲೆ ನವಿಲುಗಳು ಇದ್ದವು. ಆ ವಾಯುಸ್ಸುಗಳಲ್ಲಿ ಒಂದು ತನ್ನ ಜಾತಿಯ ವಾಯುಸ್ಸುಗಳನ್ನು ನವಿಲುಗಳನ್ನೂ ನೋಡಿ, ತನ್ನ ಜಾತಿಗಿಂತ ನವಿಲುಗಳ ಜಾತಿ ಶ್ರೇಷ್ಠವಾದದ್ದೆಂದೂ, ತಾನು ಆ ನವಿಲುಗಳಂತೆ ಇರಬೇಕೆಂದೂ ಯೋಚನೆ ಮಾಡಿ, ತನ್ನ ಜಾತಿಯನ್ನು ಧಿಕ್ಕರಿಸಿ, ಮರದ ಕೆಳಗೆ ಬಿದ್ದಿದ್ದ ನವಿಲುಗಳ ರೆಕ್ಕೆಗಳನ್ನು ಆದು ಕೊಂಡು, ತನ್ನ ರೆಕ್ಕೆಗಳಲ್ಲಿ ಜೋಡಿಸಿ, ತಾನೂ ಒಂದು ನವಿಲು ಅನ್ನುವ ಹಾಗೆ ಆ ನವಿಲುಗಳ ಗುಂಪಿನಲ್ಲಿ ಜೊತೆಯಾಗಿ ಇರ ಬೇಕೆಂದು ಪ್ರವೇಶಿಸಿ, ಕೆಲವು ದಿವಸಗಳು ಇತ್ತು. ಅದರ ಮೇಲೆ ಒಂದು ದಿವಸ ನವಿಲುಗಳು ಅದರ ಸ್ವರ ಕೇಳಿ, ಇದು ನವಿಲು ಅಲ್ಲ; ವಾಯುಸ್ಸು ನಮ್ಮನ್ನು ಮೋಸಾ ಮಾಡಿ, ನಮ್ಮಲ್ಲಿ ಕಲಿತು ಇಧೆ ಎಂದು ತಿಳಿದು ಕೊಂಡು, ಅದರ ಮೇಲೆ ಬಿದ್ದು, ಮೂಗುಗಳಿಂದಲೂ ಉಗುರುಗಳಿಂದಲೂ ಶರೀರವೆಲ್ಲಾ ಘಾಯ ಮಾಡಿ, ಅದನ್ನು ಹೊರಡಿಸಿದವು. ಆ ಮೇಲೆ ಆ ವಾಯುಸ್ಸು ಬಹು ವ್ಯಸನ ಪಟ್ಟು, ತಿರಿಗಿ ತನ್ನ ಜಾತಿಯ ಗುಂಪಿಗೆ ಬರಲು; ಅದು ಪೂರ್ವದಲ್ಲಿ ತಮ್ಮನ್ನು ನಿರಾಕರಿಸಿ, ನವಿಲುಗಳನ್ನು ಶ್ಲಾಘನೆ ಮಾಡಿ, ಅವುಗಳಲ್ಲಿ ಕೆಲವು

ದಿವಸ ಸಹವಾಸವನ್ನು ಮಾಡಿ, ಅದರ ಮೇಲೆ ಅವುಗಳ ಕೈಯಲ್ಲಿ ಪೆಟ್ಟು ತಿಂದು, ಪುನಹಾ ತಮ್ಮ ಬಳಿಗೆ ಬಂದ ಸಂಗತಿ ಯಾವತ್ತು ಅವುಗಳಿಗೆ ಚನ್ನಾಗಿ ತಿಳಿಯುವದು. ಆದದರಿಂದ ಅವು ಅದನ್ನು ನೋಡಿ, ಅಯ್ಯಾ, ನಾವು ಸ್ವಲ್ಪರೆಂದು ನಮ್ಮೆಲ್ಲರನ್ನು ನಿರಾಕರಿಸಿ, ನಮಗಿಂತ ಮಾನವಾಗಿ ಇರ ಬೇಕೆಂಬ ಮನಸ್ಸಿನಿಂದ ನೀನು ನವಿಲುಗಳ ಬಳಿಗೆ ಹೋದೆಯಲ್ಲಾ? ಈಗಲು ನೀನು ಅಲ್ಲಿಗೆ ಹೋಗಿ, ಆ ಪಕ್ಷಿಗಳಲ್ಲೇ ಇರ ತಕ್ಕದ್ದೇ ಹೊರ್ತು, ನಮ್ಮ ಬಳಿಯು ನಿನಗೆ ಏನು ಕೆಲಸ? ಹೋಗು ಎಂದು, ವಾಯಸ್ಸುಗಳು ಅದನ್ನು ತಮ್ಮಲ್ಲಿ ಶೇರಿಸಿ ಕೊಳ್ಳದೆ, ಹೊರಡಿಸಿದವು. ಆದಕಾರಣ ಯಾವನಾದರೂ ಸ್ವಜಾತಿಯುನ್ನು ಧಿಕ್ಕರಿಸಿ, ಅನ್ಯ ಜಾತಿಗಳಲ್ಲಿ ಕಲಿತರೆ, ಆತನು ಯಾವದಕ್ಕೂ ಆಗದೆ, ಕೆಟ್ಟು ಹೋಗುವನು.

## ೫೩. ಕಥೆ.

### ತೆನ್ನಾಲ ರಾಮಕೃಷ್ಣನನ್ನೂ ಅಗಸನನ್ನೂ ಕುರಿತದ್ದು.

ತೆನ್ನಾಲ ರಾಮಕೃಷ್ಣನು ಒಂದು ದಿವಸ ಹಾಸ್ಯವನ್ನು ಮಾಡಲು, ಅದರಿಂದ ಉಂಟಾದ ತಪ್ಪಿಗೆ ರಾಯರು ಕೋಪಿಸಿ, ತನ್ನ ಸೇವಕರನ್ನ ಕರಿಸಿ, ಆನೆಯು ಕಾಲುಗಳಿಂದ ತುಳಿಸಿರಿ ಎಂದು, ಅಪ್ಪಣೆ ಕೊಟ್ಟರು. ಆಗ ಅವರು ಇವನನ್ನು ಕರ ಕೊಂಡು, ಆ ಪಟ್ಣಕ್ಕೆ ಸಮೀಪವಾದ ಒಂದು ಬೈಲಿಗೆ ಹೋಗಿ, ಅಲ್ಲಿ ಹಳ್ಳವು ಅಗಿದು, ಕುತ್ತಿಗೆಯು ಪರ್ಯಂತರಕ್ಕೂ ಹೂಳಿ, ತಲೆಯನ್ನು ತುಳಿಸುವದಕ್ಕೆ ಆನೆಯನ್ನು ತರುವದಕ್ಕೋಸ್ಕರ ಹೋದರು. ಆ ಸಮ

ಯದಲ್ಲಿ ಒಬ್ಬ ಗೂನುಳ್ಳ ಅಗಸನು ಮೂಟೆಯನ್ನು ಹೊತ್ತು ಕೊಂಡು, ಆ ಮಾರ್ಗದಿಂದ ಹೋಗುತ್ತಿದ್ದು, ಇವನನ್ನು ನೋಡಿ, ಯಾಕಯ್ಯಾ, ಹೂಳಲ್ಪಟ್ಟಿದ್ದೀ? ಎಂದು ಕೇಳಿದನು. ಅದಕ್ಕೆ ಅವನು ಹೇಳಿದ್ದೇನಂದರೆ, ನನಗೆ ಅನೇಕ ದಿನಗಳಿಂದ ಗೂನು ಇತ್ತು; ಅದು ನೆಟ್ಟಗೆ ಆಗುವದಕ್ಕೆ ಒಬ್ಬ ವೈದ್ಯನು ಈ ಮೇರಿಗೆ ಹೇಳಿದ ಕಾರಣ, ನನಗೆ ಅದು ನಿವಾರಣೆ ಆಯಿತು; ನನ್ನನ್ನು ಹೊರಗೆ ತೆಗೆದು, ನೋಡು, ಅಂದನು. ಆ ಪ್ರಕಾರ ಅಗಸನು ಅವನನ್ನು ಹೊರಗೆ ತೆಗೆದು, ಅವನು ಹೇಳಿದ ಮೇರಿಗೆ ಗೂನು ಇಲ್ಲದೆ ಇರುವದನ್ನು ನೋಡಿ, ಅಯ್ಯಾ, ನನ್ನನ್ನು ಹಾಗೆಯೇ ಮಾಡಿಸು ಎಂದು, ಬೇಡಿ ಕೊಂಡನು. ಆಗ ಆ ತೆನ್ನಾಲ ರಾಮಕೃಷ್ಣನು ಅವನನ್ನು ಆ ಹಳ್ಳದಲ್ಲಿ ಇಟ್ಟು, ಕುತ್ತಿಗೆಯ ಪರ್ಯಂತರಕ್ಕೂ ಹೂಳಿ, ಅವನ ಮೂಟೆಯನ್ನು ತಾನು ಹೊತ್ತು ಕೊಂಡು, ಬಂದು, ರಾಯರನ್ನು ನೋಡಿದನು. ಆಗ ಆ ರಾಯರು, ಆನೆಯ ಕಾಲುಗಳಲ್ಲಿ ತುಳಿಸೆಂದು ಆಜ್ಞಾಪಿಸಿದೆನು; ಯಾವ ಮೇರಿಗೆ ತಪ್ಪಿ ಬಂದೆ? ಎಂದು ಕೇಳಲಾಗಿ; ಮಹಾರಾಯಾ, ನನ್ನ ಬದಲಾಗಿ ಅಗಸನನ್ನು ಹೂಳಿ, ಅವನಮೂಟೆ ನಾನು ತೆಗೆದು ಕೊಂಡು, ಬಂದೆನೆಂದು,ಹೇಳಿದನು. ಅದನ್ನು ಕೇಳಿ, ರಾಯರು ನಕ್ಕು, ಅವನ ತಪ್ಪು ಕ್ಷಮಿಸಿದರು.

## ೫೪. ಕಥೆ.

ಶೂದ್ರರಿಂದ ಬ್ರಾಹ್ಮಣನು ಮೋಸ ಹೋದದ್ದನ್ನು ಕುರಿತದ್ದು.

ತಾಂಬ್ರಪರ್ಣೀ ತೀರದಲ್ಲಿ ಶ್ರೀರಾಮ ಪುರವೆಂಬ ಅಗ್ರಹಾರದೊಳಗೆ ವಸಂತಸೋಮಯಾಜಿ ಎಂಬ ಬ್ರಾಹ್ಮಣ

ನು ಇದ್ದನು. ಆತನು ಯಜ್ಞವನ್ನು ಮಾಡ ಬೇಕೆಂದು ಆಲೋಚಿಸಿ, ಅದಕ್ಕೆ ಮೇಕೆಗಳು ಆಗ ಬೇಕಾಗಿ ಇರುವದು. ಆದದರಿಂದ ಅಲ್ಲಿಗೆ ಸಮೀಪವಾಗಿ ಇರುವ ಮತ್ತೊಂದು ಊರಿಗೆ ಹೋಗಿ, ಒಳ್ಳೇದಾಗಿ ನಾಲ್ಕೈದು ಮೇಕೆಗಳನ್ನು ಕೊಂಡು ಕೊಂಡು, ಅವುಗಳ ಕುತ್ತಿಗೆಗೆ ಹಗ್ಗ ಕಟ್ಟಿ, ತಕ್ಕೊಂಡು ಬರುತ್ತಾ ಇರಲು; ದಾರಿಯಲ್ಲಿ ನಾಲ್ಕು ಜನ ಶೂದ್ರರು ನೋಡಿ, ಆ ಮೇಕೆಗಳನ್ನು ತಾವು ಅಪಹರಿಸ ಬೇಕೆಂದು ಯೋಚನೆ ಮಾಡಿ, ಅವರಲ್ಲಿ ಒಬ್ಬನು ಬ್ರಾಹ್ಮಣನಿಗೆ ಎದುರಾಗಿ ಬಂದು, ನೀವು ಯಾರಯ್ಯಾ? ಹುಚ್ಚು ನಾಯಿಗಳನ್ನು ತೆಗೆದು ಕೊಂಡು ಹೋಗುತ್ತೀರೋ? ಎಂದು ಕೇಳಿದನು. ಆ ಮಾತುಗಳನ್ನು ಕೇಳಿ, ಇವನು ಹುಚ್ಚನು; ಮೇಕೆಗಳನ್ನು ನೋಡಿ, ಹುಚ್ಚು ನಾಯಿಗಳು ಅನ್ನುತ್ತಾನೆಂದು ಹೇಳಿ, ಸ್ವಲ್ಪ ದೂರ ಹೋಗಲು; ಆ ಶೂದ್ರರೊಳಗೆ ಮತ್ತೊಬ್ಬನು ಹಾದಿಗೆ ಎದುರು ಬಿದ್ದು, ನೀವು ಯಾರಯ್ಯಾ? ಯಾಕೆ ಹುಚ್ಚು ನಾಯಿಗಳನ್ನು ತೆಗೆದು ಕೊಂಡು ಹೋಗುತ್ತೀರಿ? ಜಾಗ್ರತೆಯಾಗಿ ಹೋಗಿ, ಈ ಹುಚ್ಚು ನಾಯಿಗಳು ಮೇಲೆ ಬಿದ್ದು, ಕಚ್ಚುವದೆಂದು, ಹೇಳಿದನು. ಆ ಮಾತು ಕೇಳಿದ ಮೇಲೆ, ಈ ಬ್ರಾಹ್ಮಣನಿಗೆ ಸ್ವಲ್ಪ ಸಂಶಯ ಉಂಟಾಯಿತು. ಆ ಮೇಲೆ ಸ್ವಲ್ಪ ದೂರ ಹೋಗಲು, ಆ ಶೂದ್ರರಲ್ಲಿ ಮತ್ತೊಬ್ಬನು ಆ ಮೇಕೆಗಳಿಗೆ ಸಮೀಪವಾಗಿ ಬಂದು ಏನಯ್ಯಾ? ಹುಚ್ಚು ನಾಯಿಗಳನ್ನು ತಂದು, ಮಾರ್ಗಸ್ಥರ ಮೇಲೆ ಬಿಡುತ್ತೀರೋ? ಎಂದು ಕೋಪ ಮಾಡಿದನು. ಆ ಮಾತನ್ನು ಕೇಳಿ, ಇವು ಹುಚ್ಚು ನಾಯಿಗಳೇ ನಿಶ್ಚಯವೆಂದು ಎಣಿಸಿ, ಅವುಗಳನ್ನು ಬಿಟ್ಟು ಬಿಡ ಬೇಕೆಂ

ದಿರಲು, ಕುತ್ತಿನ ಹಗ್ಗಗಳನ್ನು ಬಿಚ್ಚ ಹೋಗಲು; ಆ ಶೂದ್ರನು, ಅಯ್ಯಾ, ಕುತ್ತಿನ ಹಗ್ಗಗಳನ್ನು ಬಿಚ್ಚಿದರೆ, ಅವು ಮೇಲೆ ಬಿದ್ದು, ಕಚ್ಚುವವು; ಆದದರಿಂದ ಅವುಗಳನ್ನು ಗಿಡಕ್ಕೆ ಕಟ್ಟಿ ಹಾಕಿ, ಹೋಗಿರಿ ಎಂದು, ಹೇಳಿದನು. ಆ ಮೇಲೆ ಆ ಬ್ರಾಹ್ಮಣನು ಅವುಗಳನ್ನು ಒಂದು ಗಿಡಕ್ಕೆ ಕಟ್ಟಿ ಹಾಕಿ, ಓಡಿ ಹೋದನು. ಬಳಿಕ ಆ ಶೂದ್ರರು ಆ ಮೇಕೆಗಳನ್ನು ಬಿಚ್ಚಿ, ತಮ್ಮ ಮನೆಗ ತೆಗೆದುಕೊಂಡು ಹೋದರು. ಆದಕಾರಣ ನಾಲ್ಕು ಜನ ಒಂದಾದರೆ, ವಿಷ್ಟು ಬುದ್ಧಿವಂತನು ಆದಾಗ್ಯೂ ಮೋಸ ಹೋಗುವದು ನಿಶ್ಚಯವು.

## ೫೫. ಕಥೆ.

ಇಬ್ಬರು ಶೂದ್ರರು ಒಬ್ಬರಿಗೊಬ್ಬರು ಮೋಸ ಹೋದದ್ದನ್ನು ಕುರಿತದ್ದು.

ಯಾಚವರವೆಂಬ ಗ್ರಾಮದಲ್ಲಿ ಮರಳುತಕ್ಕಡಿಗನೆಂಬದಾಗಿ ಒಬ್ಬ ಶೂದ್ರನು ಇದ್ದನು. ಒಂದು ದಿನ ಅವನು ಮತ್ತೊಂದು ಊರಿಗೆ ಹೋಗ ಬೇಕೆಂದು ಹೊರಟು, ಒಂದು ಶೇರು ಮರಳು ಶೆರಗಿನಲ್ಲಿ ಗಂಟು ಕಟ್ಟಿ ಕೊಂಡು, ಹೋರಟನು. ಆ ಗ್ರಾಮಕ್ಕೆ ಸಮೀಪವಾಗಿ ಮಾಚವರವೆಂಬ ಊರಲ್ಲಿ ಸಗಣಿತಕ್ಕಡಿಗನೆಂಬ ಒಬ್ಬ ಶೂದ್ರನು ಉಂಟು. ಅವನೂ ಇನ್ನೊಂದು ಊರಿಗೆ ಹೋಗ ಬೇಕೆಂದು, ಐದು ಶೇರು ಸಗಣಿ ಒಂದು ಬಟ್ಟೆಯಲ್ಲಿ ಕಟ್ಟಿ ಕೊಂಡು, ಹೊರಗೆ ಹೊರಟನು. ಆ ಬಳಿಕ ಇವರಿಬ್ಬರೂ ಸಾಯಂಕಾಲಕ್ಕೆ ಅಕಸ್ಮಾತ್ತಾಗಿ ಒಂದು ಗ್ರಾ

ಮದಲ್ಲಿ ಪ್ರವೇಶಿಸಿ, ಅಲ್ಲಿ ಒಂದು ಧರ್ಮ ಚಾವಡಿಯಲ್ಲಿ ಕೂತು ಕೊಂಡರು. ಆಗ ಆ ಮರಳುತಕ್ಕಡಿಗನು ಸ ಗಣಿತಕ್ಕಡಿಗನ ಬಳೀಲಿ ಇರುವ ಗಂಟನ್ನು ನೋಡಿ, ಅನ್ನ ಎಂಬದಾಗಿ ಭ್ರಮಿಸಿ, ಇವನನ್ನು ಮೋಸಾ ಮಾಡಿ, ಅನ್ನವನ್ನು ತೆಗೆದು ಕೊಳ್ಳ ಬೇಕೆಂದು ಯೋಚನೆ ಮಾ ಡಿ, ಅಯ್ಯಾ, ನಿನ್ನ ಮೂಟೆಯಲ್ಲಿ ಇರುವದೇನು? ಎಂದು ಕೇಳಲಾಗಿ; ಸಗಣಿತಕ್ಕಡಿಗನು ಅದಕ್ಕಿಂತ ಮುಂಚೆ ಯೇ, ಮರಳುತಕ್ಕಡಿಗನ ಬಳೀಲಿ ಇರುವ ಗಂಟಿನಲ್ಲಿ ಅಕ್ಕಿ ಇಥೆ ಎಂದು, ಭ್ರಮಿತನಾಗಿರುವದರಿಂದ, ಅದನ್ನು ಅಪಹರಿಸ ಬೇಕೆಂಬದಾಗಿ ಇದ್ದದ್ದರಿಂದ, ನನ್ನ ಮೂಟೆ ಯಲ್ಲಿರುವದು ಅನ್ನ; ನಿನ್ನ ಮೂಟೆಯಲ್ಲಿರುವದು ಏನು? ಎಂದು ಕೇಳಿದನು. ನನ್ನ ಮೂಟೆಯಲ್ಲಿ ಅಕ್ಕಿ ಇಥೆ; ನಾನೂ ನಿನ್ನ ಹಾಗೆ ಅನ್ನವನ್ನು ಕಟ್ಟಿಕೊಂಡು ಬಾರದೆ ಹೋದೆನು. ಈಗ ಹಶಿವು ಆಗುತ್ತಾ ಇಥೆ; ಏನು ಮಾ ಡ ಬೇಕೆಂದು, ಮರಳುತಕ್ಕಡಿಗನು ವ್ಯಸನ ಪಡಲಾಗಿ; ಅಯ್ಯಾ, ನನಗೆ ಹಶಿವು ಆಗಲಿಲ್ಲ; ಆದಕಾರಣ ಆ ಅನ್ನ ದ ಮೂಟೆ ನೀನು ತೆಗೆದು ಕೊಂಡು, ನಿನ್ನ ಅಕ್ಕಿ ಮೂ ಟೆ ನನಗೆ ಕೊಡು ಎಂದು, ಸಗಣಿತಕ್ಕಡಿಗನು ಹೇಳಿದ ನು. ಒಳ್ಳೇದೆಂದು, ಇಬ್ಬರೂ ಸಮ್ಮತಿಸಿ, ಒಬ್ಬನ ಗಂ ಟು ಒಬ್ಬನು ತೆಗೆದು ಕೊಂಡು, ಒಬ್ಬರಿಗೊಬ್ಬರು ಭಯ ಪಡುತ್ತಾ, ಅಲ್ಲಿ ನಿಲ್ಲದೆ, ಆ ಸ್ಥಳವನ್ನು ಬಿಟ್ಟು, ಹೊರ ಟು, ಸ್ವಲ್ಪ ದೂರ ಹೋಗಿ, ಮೂಟೆಗಳನ್ನು ಬಿಚ್ಚಿ, ನೋಡಿ ಕೊಂಡು, ಬಹಳ ಆಶ್ಚರ್ಯ ಪಟ್ಟರು. ಆದಕಾ ರಣ ಒಬ್ಬನನ್ನು ಮೋಸಾ ಮಾಡ ಬೇಕೆಂದು ನೆನಸಿದ ರೆ, ತನ್ನನ್ನು ಮತ್ತೊಬ್ಬನು ಮೋಸಾ ಮಾಡುವನು.

## ೩೬. ಕಥೆ.

ಬಕ ಪಕ್ಷಿಯನ್ನೂ ಮತ್ಸ್ಯಗಳನ್ನೂ ಕುರಿತದ್ದು.

ವಿಮಲಾವತಿ ಎಂಬ ಸರಸ್ಸಿನಲ್ಲಿ ನಾನಾ ವಿಧವಾದ ಮತ್ಸ್ಯಗಳು ಬಹು ಕಾಲದಿಂದ ವಾಸ ಮಾಡಿ ಕೊಂಡು ಇದ್ದವು. ಒಂದು ದಿನ ಅಲ್ಲಿಗೆ ಒಂದು ಬಕ ಬಂದು, ಅಲ್ಲಿ ಇರುವ ಮತ್ಸ್ಯಗಳನ್ನೆಲ್ಲಾ ನೋಡಿ, ಹ್ಯಾಗಾದರೂ ಇವುಗಳನ್ನು ಭಕ್ಷಿಸ ಬೇಕೆಂದು ನೆನಸಿ, ನೀರಿಗೆ ಸಮೀಪವಾಗಿ ಕೂತುಕೊಂಡು ಇರಲಾಗಿ; ಆ ಮತ್ಸ್ಯಗಳಷ್ಟೂ ತನ್ನನ್ನು ನೋಡಿ, ಓಡಿ ಹೋಗುವದನ್ನು ಕಂಡು, ಅವುಗಳೊಡನೆ, ಓ ಮತ್ಸ್ಯಗಳಿರಾ, ನಾನು ನಿಮ್ಮನ್ನು ಆಹಾರ ಮಾಡಿ ಕೊಳ್ಳುವೆನೆಂದು, ನೀವೆಲ್ಲರು ಭಯ ಪಟ್ಟು, ಓಡಿ ಹೋಗುತ್ತೀರಿ; ಹಾಗೆ ಓಡಿ ಹೋಗ ಬೇಡಿರಿ; ನಾನು ಈ ವರಿಗೂ ಬಹು ಜೀವ ಹಿಂಸೆ ಮಾಡಿ, ಈ ಮುದಿ ಪ್ರಾಯದಲ್ಲಿ ನನಗೆ ಅತಿ ಶ್ರಮೆ ಸಂಭವಿಸಿ ಇದೆ; ಆದಕಾರಣ ಇನ್ನು ಮೇಲೆ ನಾನು ಜೀವ ಹಿಂಸೆ ಮಾಡುವದಿಲ್ಲವೆಂದು, ತಪಸ್ಸು ಮಾಡುತ್ತೇನೆ; ನನಗೆ ನೀವು ಎಷ್ಟು ಮಾತ್ರವೂ ಭಯ ಪಡ ಕೆಲಸವಿಲ್ಲ; ನೀವು ನಿರ್ಭಯವಾಗಿ ತಿರಿಗಿರಿ ಎಂದು, ಆ ಬಕವು ಹೇಳಲಾಗಿ; ಆ ಮೀನುಗಳಿಗೆ ನಂಬಿಕೆ ಹುಟ್ಟದೆ ಇದ್ದದರಿಂದ, ಈ ಬಕ ಪಕ್ಷಿಯು ಭರವಸವಾದ ಮಾತುಗಳನ್ನು ಹೇಳುತ್ತಾ ಇದ್ದದರಿಂದ, ನಂಬಿ ಇದ್ದವು. ಆ ಮೇಲೆ ಮತ್ಸ್ಯಗಳು ತನ್ನ ಬಳಿಗೆ ಬಂದರೂ, ಮೇಲೆ ಬಿದ್ದರೂ, ಸುಮ್ಮನೆ ಇತ್ತು. ಈ ಪ್ರಕಾರ ಕೆಲವು ದಿನಗಳು ನಡೆದ ಮೇಲೆ, ಒಂದು ದಿನ ಬಕ ಪಕ್ಷಿಯು ಶಾನೆ ಯೋಚನೆಯಿಂದ ಕೂತು ಕೊಂ

ಡು ಇರಲಾಗಿ, ಆ ಮತ್ಸ್ಯಗಳೆಲ್ಲಾ ಅದರ ಬಳಿಗೆ ಬಂದು, ಎಲೋ, ಪಕ್ಷಿರಾಯನೇ, ಈ ದಿನ ನೀನು ಯಾಕೆ ಬಹಳ ಯೋಚನೆ ಮಾಡುತ್ತಾ ಇದ್ದೀ? ಎಂದು ಕೇಳಲಾಗಿ; ನಾನು ಏನೆಂದು ಹೇಳಲಿ? ಇನ್ನು ಮೇಲೆ ಈ ಭೂಮಿಯಲ್ಲಿ ದ್ವಾದಶ ವರುಷ ಕ್ಷಾಮು ಬರುತ್ತದೆ; ಆಗ ಈ ಸರೋವರದಲ್ಲಿ ನೀರು ನಿಲ್ಲದೆ, ಒಣಗಿ ಹೋಗುತ್ತದೆ; ಈ ವಿವರವು ನಾನು ಜ್ಞಾನ ದೃಷ್ಟಿಯಿಂದ ತಿಳು ಕೊಂಡೆನು; ನೀವು ನನಗೆ ಸ್ನೇಹಿತರು; ಆದದರಿಂದ ಇದರಲ್ಲಿ ನೀರು ಒಣಗಿ ಹೋದ ಮೇಲೆ ನೀವೆಲ್ಲಾ ಸತ್ತು ಹೋಗುತ್ತೀರೆಂದು, ಯೋಚನೆ ಮಾಡುತ್ತೇನೆಂದು ಹೇಳಲಾಗಿ; ಆ ಮತ್ಸ್ಯಗಳು, ಈ ಪಕ್ಷಿರಾಯನಿಗೆ; ನಮ್ಮಲ್ಲಿ ಬಹಳ ಅಂತಃಕರಣ ಇಧೆ ಎಂದೆಣಿಸಿ, ನಂಬಿ, ಸಂತೋಷ ಪಟ್ಟು, ಕೇಳಯ್ಯಾ, ಪಕ್ಷಿ ರಾಯನೇ, ಹಾಗೆ ಅನಾವೃಷ್ಟಿ ಬಂದರೆ, ನಾವು ಹ್ಯಾಗೆ ಬದುಕ ಬೇಕು? ಅದಕ್ಕೆ ಯೋಚನೆಯನ್ನು ಹೇಳಯ್ಯಾ, ಅನ್ನಲಾಗಿ; ಆಗ ಆ ಮತ್ಸ್ಯಗಳನ್ನು ನೋಡಿ, ಇಲ್ಲಿಗೆ ಸ್ವಲ್ಪ ದೂರವಾಗಿ ಒಂದು ಸರೋವರ ಇಧೆ, ಅದರಲ್ಲಿ ನೀರು ಎಂದೆಂದಿಗೂ ಬತ್ತಿ ಹೋಗುವದಿಲ್ಲ; ಆ ಸ್ಥಳ ನಿಮಗೆ ಸೌಖ್ಯವಾಗಿ ಇರುವದೆಂದು, ಹೇಳಿತು. ಹಾಗಾದರೆ ನಮ್ಮೆಲ್ಲರನ್ನು ನೀನು ಕರೆದು ಕೊಂಡು ಹೋಗಿ, ಅದರಲ್ಲಿ ಬಿಡ ಬೇಕೆಂದು, ಹೇಳಲಾಗಿ; ಒಳ್ಳೇದೆಂದು ಹೇಳಿ, ಒಂದೊಂದಾಗಿ ಮತ್ಸ್ಯಗಳನ್ನು ಸಾಗಿಸಿ ಕೊಂಡು ಹೋಗಿ, ಒಂದು ಬೆಟ್ಟದ ಮೇಲೆ ಬಿಸಲಲ್ಲಿ ಇಟ್ಟು ಕೊಂಡು, ತನಗೆ ಬೇಕಾದಷ್ಟು ತಿನ್ನುತ್ತಾ ಬಂತು. ಆದಕಾರಣ ಶತ್ರುಗಳು ಎಷ್ಟು ಬಗೇಲಿ ನಂಬಿಕೆ ಮಾತು ಹೇಳಿದಾಗ್ಯೂ, ನಂಬ ಬಾರದು.

## ೫೩. ಕಥೆ.

### ಬ್ರಾಹ್ಮಣನನ್ನೂ ಹುಲಿಯನ್ನೂ ಜಿಂಕೆಯನ್ನೂ ಕುರಿತದ್ದು.

ಗನ್ನಗರವೆಂಬ ಊರಲ್ಲಿ ದೇವಶರ್ಮನೆಂಬ ಬ್ರಾಹ್ಮಣನು ಇದ್ದನು. ಆತನು ಬಹಳ ದರಿದ್ರನು. ನಿತ್ಯವು ಆ ಊರೊಳಗೆ ಹತ್ತು ಮನೆಗಳಲ್ಲಿ ಉಪಾದಾನ ಎತ್ತಿ ಕೊಂಡು ಬಂದು, ಅದರಿಂದ ಕಾಲಕ್ಷೇಪ ಮಾಡುತ್ತಾ ಇದ್ದನು. ಒಂದು ದಿನ ಆ ವಿಪ್ರನು ಕಟ್ಟಿಗೆ ತರುವ ನಿಮಿತ್ಯವಾಗಿ ಅರಣ್ಯಕ್ಕೆ ಹೋಗಲು; ಅಲ್ಲಿ ಒಂದು ಹುಲಿಯನ್ನು ಕಂಡು, ಭಯ ಪಟ್ಟು, ಗಡಗಡನೆ ನಡುಗಿ ಕೊಂಡು, ಬರಲು; ಆ ಸಮಯದಲ್ಲಿ ಎರಡು ಜಿಂಕೆಗಳು ನೋಡಿ, ಈತನು ಭಯ ಪಟ್ಟಿದ್ದಾನೆಂದು ತಿಳಿದು, ಜಾಗ್ರತೆಯಾಗಿ ಹುಲಿಯ ಬಳಿಗೆ ಬಂದು, ಎಲೋ ಮೃಗರಾಯನೇ, ಈಗ ಒಬ್ಬ ಬ್ರಾಹ್ಮಣನು, ಬಹಳ ದರಿದ್ರನು, ನಿನ್ನ ದರ್ಶನಕ್ಕೋಸ್ಕರ ಇಲ್ಲಿಗೆ ಬಂದು ಇದ್ದಾನೆಂದು, ಹೇಳಲಾಗಿ; ಹುಲಿಯು ಸಂತೋಷ ಪಟ್ಟು, ಆತನನ್ನು ಇಲ್ಲಿಗೆ ಕರ ಕೊಂಡು ಬನ್ನಿ, ಎಂದು ಹೇಳಲು; ಆ ಜಿಂಕೆಗಳು ಆ ಬ್ರಾಹ್ಮಣನ ಬಳಿಗೆ ಬಂದು, ಎಲೋ, ಬ್ರಾಹ್ಮಣನೇ, ನೀನು ಭಯ ಪಡ ಬೇಡವೆಂದು ಹೇಳಿ, ಹುಲಿಯ ಬಳಿಗೆ ಕರ ಕೊಂಡು ಬರಲು; ಹುಲಿಯು ಅತಿ ಪ್ರೀತಿಯಿಂದ ಕಂಡು, ತಾನು ಮುಂಚಿತವಾಗಿ ಮನುಷ್ಯರನ್ನು ಕೊಂದು, ಅವರ ಆಭರಣಗಳನ್ನೆಲ್ಲಾ ತನ್ನಲ್ಲಿ ಇಟ್ಟು ಕೊಂಡು ಇತ್ತು. ಆದಕಾರಣ ಅದರಲ್ಲಿ ಆತನಿಗೆ ಬೇಕಾದಷ್ಟು ಕೊಟ್ಟು, ಕಳುಹಲಾಗಿ; ಆತನು ತಕ್ಕೊಂಡು ಬಂದು, ತನ್ನ ಊರಲ್ಲಿ ಮಾರಿ

ಕೊಂಡು, ದ್ರವ್ಯವಂತನಾಗಿ ಸಂತೋಷದಿಂದ ಇದ್ದನು. ಅದನ್ನು ನೆರೆ ಮನೆಯುವನು ಕೇಳಿ, ನಾನೂ ಆ ಪ್ರಕಾರವೇ ಸಂಪಾದಿಸ ಬೇಕೆಂದು ನೆನಸಿ, ಆ ಅರಣ್ಯಕ್ಕೆ ಬರಲು; ಅದರ ಸಮೀಪದಲ್ಲಿ ಎರಡು ನರಿಗಳು ಇದ್ದದರಿಂದ, ಈತನ್ನ ಹ್ಯಾಗಾದರೂ ತಿನ್ನ ಬೇಕೆಂದು ನೆನಸಿ, ಹುಲಿಯ ಬಳಿಗೆ ಬಂದು, ಅಗೋ, ಮನುಷ್ಯನು ಬರುತ್ತಾನೆಂದು ಹೇಳಲು; ಹುಲಿಯು ಓಡಿ ಹೋಗಿ, ಅವನ ಕತ್ತು ಮುರಿದು, ಕೊಂದು ಹಾಕಿತು; ಆ ಮೇಲೆ ಕೆಲವು ಅಂಗಗಳನ್ನು ತಿಂದು ಬಿಟ್ಟಿತು; ನರಿಗಳು ಮಿಕ್ಕಾದ್ದೆಲ್ಲಾ ಭಕ್ಷಿಸಿದವು. ಆದಕಾರಣ ಅರಸುಗಳ ಬದೀಲಿ ದುರ್ಜನರು ಇದ್ದರೆ, ಮನುಷ್ಯರಿಗೆ ಮಹತ್ತಾದ ಆಪತ್ತು ಉಂಟಾಗುವದು.

## ೫೮. ಕಥೆ.

ತೆನ್ನಾಲ ರಾಮಕೃಷ್ಣನನ್ನೂ ಅರಸನ ಸೇವಕರನ್ನೂ ಕುರಿತದ್ದು.

ಒಂದು ದಿವಸ ತೆನ್ನಾಲ ರಾಮಕೃಷ್ಣನು ರಾಯರ ಮುಂದೆ ಹಾಸ್ಯವನ್ನು ಮಾಡಿ, ಅದರ ದೆಶೆಯಿಂದ ರಾಯರವರಿಗೆ ತುಂಬಾ ಕೋಪ ಬಂದದ್ದರಿಂದ, ಇಬ್ಬರು ಸೇವಕರನ್ನು ಕರಿಸಿ, ಅವನನ್ನು ಅವರ ವಶಕ್ಕೆ ಕೊಟ್ಟು, ಇವನನ್ನು ದೂರವಾಗಿ ತೆಗೆದು ಕೊಂಡು ಹೋಗಿ, ಇವನ ತಲೆಯನ್ನು ಕಡಿದು ಹಾಕಿರಿ ಎಂದು, ಆಜ್ಞಾಪಿಸಿದರು. ಅದೇ ಮೇರಿಗೆ ಅವರು ಅವನನ್ನು ಹೊರಗೆ ಕರ ಕೊಂಡು ಹೋಗಿ, ಕಡಿಯ ಹೋಗಲು; ಅವರಿಗೆ ಹಿತಕರವಾಗಿ ಮಾತುಗಳನ್ನು ಹೇಳಿ, ನಾನು ಸದ್ಗತಿಯನ್ನು ಹೊಂ

ದುವದಕ್ಕಾಗಿ ಒಂದು ಕೆರೆಯೊಳಗೆ ಇಳಿದು, ಎದೆ ಉದ್ದ ನೀರಿನಲ್ಲಿ ಸ್ವಲ್ಪ ಹೊತ್ತು ದೇವರ ಧ್ಯಾನವನ್ನು ಮಾಡಿದ ತರುವಾಯು, ಇಂ ಎಂದು ಅನ್ನುತ್ತೇನೆ; ತಕ್ಷಣವೇ ನೀವಿಬ್ಬರು ನನ್ನ ಎರಡು ಕಡೆಯಲ್ಲಿ ಇದ್ದು, ಒಂದೇ ಸಾರಿ ಕಡಿಯ ಬಹುದೆಂದು, ಹೇಳಲಾಗಿ, ಅವರು ಅದಕ್ಕೆ ಸಮ್ಮತಿ ಪಟ್ಟ ಕಾರಣ, ರಾಮಕೃಷನು ಅದೇ ಪ್ರಕಾರ ಒಂದು ಕೆರೆಯನ್ನು ನೋಡಿ, ಅದರಲ್ಲಿ ಪ್ರವೇಶಿಸಿ, ದೇವರ ಧ್ಯಾನವನ್ನು ಮಾಡುವವನ ಹಾಗೆ ಇದ್ದು, ತಿಳಿಯದ ಹಾಗೆ ಇಂ ಎಂದು ಹೇಳಿ, ನೀರಿನಲ್ಲಿ ಮುಣಿಗಿದನು. ಆಗ ಅವರು ಅತಿ ತ್ವರೆಯಿಂದ ಕತ್ತಿ ಬಿಸರಿದರಿಂದ ಒಬ್ಬನ ಕತ್ತಿ ಒಬ್ಬನ ಮೇಲೆ ಬಿದ್ದು, ಆ ಸೇವಕರು ಹತವಾದರು. ತರುವಾಯ ಅವನು ರಾಯರ ಎದುರಿಗೆ ಹೋಗಿ, ನಿಂತನು. ಅವರು ಇವನನ್ನು ನೋಡಿ, ಯಾವ ಪ್ರಕಾರ ಬದುಕಿ ಬಂದೆ? ಎಂದು ಕೇಳಲು; ಅವನು ಸೇವಕರು ಒಬ್ಬರಿಗೊಬ್ಬರು ಕಡಿದು ಕೊಳ್ಳುವ ಹಾಗೆ ಯುಕ್ತಿ ಮಾಡಿ, ನಾನು ತಪ್ಪಿಸಿ ಕೊಂಡು ಬಂದೆನೆಂದು, ಹೇಳಲು; ಆ ರಾಯರು ಸಂತೋಷ ಪಟ್ಟು, ಆ ದಿವಸದಲ್ಲಿ ಇವನು ಮಾಡಿದ ತಪ್ಪು ಕ್ಷಮಿಸಿದರು.

## ೫೯. ಕಥೆ.

ಆನೆಗಳನ್ನೂ ನರಿಗಳನ್ನೂ ಕುರಿತದ್ದು.

ಪೂರ್ವ ಕಾಲದಲ್ಲಿ ದಕ್ಷಿಣ ದೇಶದೊಳಗೆ ಅನಾವೃಷ್ಟಿಯಿಂದ ಕೆರೆಗಳಲ್ಲಿಯೂ, ನದಿಗಳಲ್ಲಿಯೂ, ಸರೋವರಗಳಲ್ಲಿಯೂ, ಎಲ್ಲಿಯೂ ನೀರು ಇಲ್ಲದೆ ಹೋದ್ದರಿಂದ

ಆ ಪ್ರಾಂತ್ಯದಲ್ಲಿರುವ ಆನೆಗಳಿಗೆ ಕುಡಿಯುವದಕ್ಕೆ ನೀರು ಶಿಕ್ಕದೆ ಬಹಳ ದಾಹವನ್ನು ಹೊಂದಿ, ನೀರು ಬಹಳವಾಗಿರುವ ಸ್ಥಳಕ್ಕೆ ಹೋಗ ಬೇಕೆಂದು, ಅವೆಲ್ಲಾ ಹೊರಟು ಹೋಗುತ್ತಾ ಇರುವಾಗ; ಮಾರ್ಗ ದಲ್ಲಿ ಚಂದ್ರ ಪುಷ್ಕರಣಿ ಎಂಬದಾಗಿ ಒಂದು ಸರೋವರ ಕಾಣಿಸಿತು. ಅದರಲ್ಲಿ ಸಮೃದ್ಧಿಯಾಗಿ ನೀರು ಇದ್ದದರಿಂದ, ನಿಂತು, ದಾಹ ತೀರಿಸಿ ಕೊಂಡು, ಇನ್ನು ಮೇಲೆ ದೇಶದಲ್ಲಿ ಮಳೆ ಬಂದು, ಸುಭಿಕ್ಷ ಆಗುವ ವರಿಗೂ ಆ ಸ್ಥಳದಲ್ಲೇ ಇರ ಬೇಕೆಂದು ಯೋಚನೆ ಮಾಡಿ, ಅಲ್ಲಿಗೆ ಸಮೀಪವಾಗಿರುವ ಅರಣ್ಯದಲ್ಲಿ ವಾಸಾ ಮಾಡುತ್ತಾ, ಪ್ರತಿ ದಿನವೂ ಆ ಸರೋವರಕ್ಕೆ ಬಂದು, ನೀರು ಕುಡಿದು, ಹೋಗುತ್ತಾ ಇದ್ದವು. ಆನೆಗಳು ಸಂಚಾರ ಮಾಡುವ ದಾರಿಯಲ್ಲಿ ಅವುಗಳ ಕಾಲಿನ ಸಂದಿನಲ್ಲಿ ಅನೇಕ ನರಿಗಳು ತಗಲಿ, ಸತ್ತು ಹೋದವು. ಆದಕಾರಣ ಆ ನರಿಗಳು ಎಲ್ಲಾ ಒಂದಾಗಿ, ಈ ಆನೆಗಳು ಇಲ್ಲಿಗೆ ಬಾರದ ಹಾಗೆ ಮಾಡ ಬೇಕೆಂದು ಯೋಚನೆ ಮಾಡುತ್ತಿರುವಾಗ, ಅವುಗಳಲ್ಲಿ ಒಂದು ನರಿ ಮಿಕ್ಕಾದ ನರಿಗಳನ್ನು ನೋಡಿ, ನೀವು ಇದಕ್ಕೆ ಯಾಕೆ ಯೋಚನೆ ಮಾಡುತ್ತೀರಿ? ನಾನು ಒಂದು ಉಪಾಯದಿಂದ ಈ ಆನೆಗಳನ್ನೆಲ್ಲಾ ಓಡಿ ಹೋಗುವ ಹಾಗೆ ಮಾಡುವೆನು; ಭಯ ಪಡ ಬೇಡಿರಿ ಎಂದು ಹೇಳಿ, ಒಂದು ದಿನ ರಾತ್ರಿ ಬೆಳದಿಂಗಳು ಪ್ರಕಾಶಿಸುತ್ತಿರಲು, ಆ ನರಿಯು ಸರೋವರಕ್ಕೆ ಸಮೀಪವಾಗಿರುವ ಒಂದು ಬೆಟ್ಟದ ಮೇಲೆ ಹತ್ತಿ, ಕೂತು ಕೊಂಡು, ಆ ಆನೆಗಳನ್ನು ನೋಡಿ, ಇಂತೆಂದಿತು—ಓ ಆನೆಗಳಿರಾ, ಈ ಸರೋವರಕ್ಕೆ ಅಧಿಪತಿಯಾದ ಚಂದ್ರನು ನಿಮ್ಮ ಸಂಗಡ ಒಂದು

ಮಾತು ಹೇಳಿ ಬರುವ ಹಾಗೆ, ಇಲ್ಲಿಗೆ ನನ್ನನ್ನು ಕಳುಹಿಸಿದನು; ಈ ಸರೋವರಕ್ಕೆ ನಿತ್ಯವೂ ಚಂದ್ರನು ತನ್ನ ಸ್ತ್ರೀಯುರೊಡನೆ ಬಂದು, ಜಲಕ್ರೀಡೆ ಮಾಡುವನು; ನೀವು ಇಲ್ಲಿ ಇರ ಕೂಡದು; ಇಲ್ಲೇ ಇದ್ದರೆ, ಈ ರಾತ್ರಿಯಲ್ಲೇ ನಿಮ್ಮನ್ನು ನಾಶನ ಮಾಡುವೆನು, ಎಂದು ಹೇಳುತ್ತಾನೆ; ಆತನು ಕೋಪಾ ಮಾಡಿದ ಸಂಗತಿಯನ್ನು ನಿಮಗೆ ಹೇಳಿದೆನು; ನನ್ನ ಮಾತು ನಿಮಗೆ ನಿಶ್ಚಯವಾಗಿ ತೋರದೆ ಇದ್ದರೆ, ಈ ಸರೋವರದಲ್ಲಿ ನೋಡಿರಿ; ಪ್ರತ್ಯಕ್ಷವಾಗಿ ಕಾಣಿಸುತ್ತಾ ಇದ್ಧಾನೆ, ಎಂದು ಹೇಳಲು; ಆ ಆನೆಗಳೆಲ್ಲಾ ಆಶ್ಚರ್ಯ ಪಟ್ಟು, ಆ ಸರೋವರದಲ್ಲಿ ನೋಡಲಾಗಿ ಚಂದ್ರನ ಬಿಂಬವು ಪ್ರತಿ ಫಲಿಸಿ, ಕದಲಿದ ಹಾಗೆ ಕಾಣಿಸಲು, ನಿಶ್ಚಯ ಎಂದು ತಿಳಿದು, ಭಯ ಪಟ್ಟು, ನಡುಗುತ್ತಾ, ಎಲೋ, ಚಂದ್ರನೇ, ನಮ್ಮ ಅಪರಾಧವನ್ನು ಮನ್ನಿಸು; ಇನ್ನು ಮೇಲೆ ನಾವು ಇಲ್ಲಿ ಇರುವದಿಲ್ಲವೆಂದು ಹೇಳಿ, ಓಡಿ ಹೋದವು. ಆದಕಾರಣ ಉಪಾಯದಿಂದ ಸಕಲ ಕಾರ್ಯಗಳನ್ನು ಜಯಿಸ ಬಹುದು.

## ೬೦ ಕಥೆ.

### ಮೂರು ಮೀನುಗಳನ್ನು ಕುರಿತದ್ದು.

ಒಂದು ಅರಣ್ಯದಲ್ಲಿ ಒಂದು ಸರೋವರ ಇರುವದು. ಆ ಸರೋವರದಲ್ಲಿ ಮೂರು ಮೀನುಗಳುಂಟು. ಅವುಗಳಲ್ಲಿ ಒಂದು ಬುದ್ಧಿ ಕುಶಲತೆ ಉಂಟಾದದ್ದು, ಅದು ತನ್ನ ಅಂತರಂಗದಲ್ಲಿ ಆಲೋಚಿಸಿ ನೋಡಲಾಗಿ; ಇನ್ನು ಮೇಲೆ ಈ ಸರೋವರದಲ್ಲಿ ನೀರು ಇರುವದಿಲ್ಲವೆಂದು ತಿಳಿ

ದು, ಕಡಿಮೆ ಎರಡು ಮೀನುಗಳನ್ನು ಕರೆದು, ಇನ್ನು ಮೇಲೆ ಬಿಸಲು ಕಾಲದಲ್ಲಿ ನೀರು ಇರುವದಿಲ್ಲ; ಆ ಸಮಯದಲ್ಲಿ ಬೆಸ್ತರು ಬಂದು, ನಮ್ಮನ್ನು ಹಿಡಿದು ಕೊಂಡು, ಕೊಂದು ಹಾಕುವರು; ಆದದರಿಂದ ಈಗಲೇ ನಾವು ಮೆಲ್ಲಗೆ ಸಮುದ್ರಕ್ಕೆ ಆಗಲಿ, ಇನ್ನೊಂದು ಸರೋವರಕ್ಕೆ ಆಗಲಿ ಹೋದರೆ, ಬದುಕುತ್ತೇವೆ; ಇಲ್ಲದಿದ್ದರೆ, ಬದುಕುವದು ಇಲ್ಲ. ಇಲ್ಲಿ ಇದ್ದರೆ, ನಮಗೆ ಮಹಾ ಕಷ್ಟವು ಪ್ರಾಪ್ತಿಸುವದು ಎಂದು ಹೇಳಲಾಗಿ; ಆ ಮಾತುಗಳನ್ನು ಕೇಳಿ, ಆ ಎರಡು ಮೀನುಗಳು ಅಪಹಾಸ್ಯ ಮಾಡಿದವು. ಆ ಮೀನು ಪ್ರವಾಹದಲ್ಲಿ ಪ್ರವೇಶಿಸಿ, ಅಲ್ಲಿಂದ ಹೋಗಿ, ಸಮುದ್ರವನ್ನು ಶೇರಿತು. ಆ ಮೇಲೆ ಕೆಲವು ದಿವಸಗಳಿಗೆ ಬಿಸಲು ಕಾಲ ಬರಲು, ಆ ಸರೋವರದಲ್ಲಿ ನೀರು ಬತ್ತಿ ಹೋಯಿತು. ಆಗ ಒಬ್ಬ ಬೆಸ್ತನು ಬಂದು, ಬಲೆ ಹಾಕಿ, ಆ ಎರಡು ಮೀನುಗಳನ್ನು ಹಿಡಿದು ಕೊಂಡು, ಧಡದಲ್ಲಿ ಹಾಕಿದನು. ಆ ಎರಡರಲ್ಲಿ ಒಂದು ಸತ್ತು ಹೋದ ಹಾಗೆ ಕದಲದೆ, ನೆಲದ ಮೇಲೆ ಬಿದ್ದು ಇತ್ತು. ಎರಡನೇ ಮೀನು ಸುಮ್ಮನೆ ಇರದೆ, ಹಾರ್ಯಾಡುತ್ತಾ ಇತ್ತು. ಆದಕಾರಣ ಅವನು ಅದನ್ನು ಭೂಮಿಯ ಮೇಲೆ ಹೊಡೆದು, ಕೊಂದು ಹಾಕಿದನು. ಎರಡನೇ ಮೀನು ಅವನಿಗೆ ತಿಳಿಯದ ಹಾಗೆ ಮೆಲ್ಲಗೆ ನೀರಿನಲ್ಲಿ ಪ್ರವೇಶಿಸಿತು. ಆದದರಿಂದ ಬರ ಹೋಗುವ ಉಪದ್ರಗಳ ಮುಂಚಿತವಾಗಲೇ ತಪ್ಪಿಸಿ ಕೊಳ್ಳುವದಕ್ಕೆ ಉಪಾಯವನ್ನು ಹುಡುಕಿ ಕೊಳ್ಳುವವನು ಸುಖ ಪಡುವನು. ಆ ಮೇಲೆ ಆದರೂ ಪ್ರಯತ್ನ ಮಾಡುವವನು ಸ್ವಲ್ಪ ಸುಖ ಪಡುವನು. ಏನೂ ತಿಳಿಯದವನು ಕೆಟ್ಟು ಹೋಗುವನು.

## ೬೧. ಕಥೆ.

### ಅನಾವೃಷ್ಟಿ ಕಾಲದಲ್ಲಿ ಬಕಗಳನ್ನು ಕುರಿತದ್ದು.

ಒಂದು ಕೆರೇ ಕಟ್ಟೆಯ ಮೇಲೆ ಒಂದು ಹುಣಿಸೇ ಮರ ಇರುವದು. ಅದರಲ್ಲಿ ಒಂದು ಬಕವು ವಾಸವಾಗಿ ಇರುವದು. ಅದು ಮುದಿ ಆದಕಾರಣ ಆ ಸ್ಥಳವನ್ನು ಬಿಟ್ಟು, ಮತ್ತೊಂದು ಸ್ಥಳಕ್ಕೆ ಹೋಗಿ, ಆಹಾರವನ್ನು ಸಂಪಾದಿಸಿ ಕೊಳ್ಳುವದಕ್ಕೆ ಶಕ್ತಿ ಇಲ್ಲದೆ, ಆ ಕೆರೆಯಲ್ಲಿರುವ ಮೀನುಗಳನ್ನು ಭಕ್ಷಿಸುತ್ತಾ, ಆ ಮರದ ಮೇಲೆ ಇದ್ದು, ಪ್ರತಿ ದಿನವೂ ಆ ಮಾರ್ಗದಲ್ಲಿ ಬರುವ ಪಕ್ಷಿಗಳನ್ನು ಕರೆದು, ಈ ದಿನ ಇಲ್ಲಿ ಇದ್ದು, ಈ ಕೆರೆಯಲ್ಲಿರುವ ಮೀನುಗಳನ್ನು ಭಕ್ಷಿಸಿ, ನಾಳೆ ಹೋಗಿರಿ ಎಂದು, ಮಹಾ ವಿನಯದಿಂದ ಹೇಳುವದು. ಆ ಪಕ್ಷಿಗಳು ಅದನ್ನು ನೋಡಿ, ನೀನು ಮುದಿಯಾಗಿ ಇದ್ಧೀ; ನಾವು ಇಲ್ಲಿ ಇದ್ದು, ಈ ಕೆರೆಯಲ್ಲಿ ಉಂಟಾದ ಜಲ ಚರಗಳನ್ನು ತಿಂದು ಹೋದರೆ, ಮಾರಣೆ ದಿನ ನಿನಗೆ ಆಹಾರವು ಇಲ್ಲದೆ, ಸತ್ತು ಹೋಗುತ್ತೀ; ನಾವು ಇಲ್ಲಿ ನಿಲ್ಲುವದಿಲ್ಲ ಎಂದು, ಹೋಗುತ್ತಾ ಇರುವವು. ಈ ಪ್ರಕಾರ ಇರಲಾಗಿ; ದೈವ ವಶದಿಂದ ಭೂಮಿಯಲ್ಲಿ ಮಹಾ ಕ್ಷಾಮ ಉಂಟಾಗಿ, ಎಲ್ಲಿಯೂ ನೀರು ಇಲ್ಲದ್ದರಿಂದ ಪಕ್ಷಿಗಳೆಲ್ಲಾ ಬಹಳ ವ್ಯಸನವನ್ನು ಹೊಂದಿ, ಮತ್ತೆಲ್ಯಾದರೂ ಸಮೃದ್ಧಿಯಾಗಿ ನೀರು ಇರುವ ಸ್ಥಳಕ್ಕೆ ಹೋಗಿ, ಈ ಕ್ಷಾಮ ಕಾಲ ಕಳೆಯ ಬೇಕೆಂದು ನೆನಸಿ, ಗುಂವು ಕೂಡಿ, ಅಂತರಿಕ್ಷದಲ್ಲಿ ಹಾರುತ್ತಾ, ಎಲ್ಲಿಯೂ ನೀರು ಕಾಣದೆ, ಆ ಮುದಿ ಪಕ್ಷಿ ಇರುವ ಮರದ ಸಮೀಪಕ್ಕೆ ಬಂದು, ಅದನ್ನು ನೋಡಿ,

ಈಗಲು ದುರ್ಭಿಕ್ಷ ಬಂದು ಇಧೆ; ಈ ಕೆರೆಯಲ್ಲಿ ನೀರು ಒಂದು ಸಂವತ್ಸರದಲ್ಲಿ ಬತ್ತಿ ಹೋಗುವದು; ಆ ಮೇಲೆ ನಿನಗೆ ಆಹಾರ ಇಲ್ಲದೆ, ಸತ್ತು ಹೋಗುತ್ತೀ; ಆದಕಾರಣ ಈಗಲು ನಮ್ಮ ಸಂಗಡ ಬಂದರೆ, ಸಾಖ್ಯ ಪಡ ಬಹುದು; ಬಾ, ಎಂದು ಹೇಳಲಾಗಿ; ಆ ಬಕಪಕ್ಷಿಗೆ ಹಾರುವದಕ್ಕೆ ಶಕ್ತಿ ಸಾಲದೆ, ತಾನು ಬರಲಾರೆನೆಂದು ಹೇಳಿ, ಆ ಪಕ್ಷಿಗಳನ್ನೆಲ್ಲಾ—ಇಲ್ಲಿ ಒಂದು ದಿನ ಇದ್ದು, ಹೋಗಿರೆಂದು, ಬಲವಂತ ಮಾಡಲಾಗಿ; ನಾವು ಇಲ್ಲಿ ನಿಂತರೆ, ಒಂದು ದಿನದಲ್ಲಿ ಈ ಕೆರೆಯಲ್ಲಿರುವ ಮೀನುಗಳೆಲ್ಲಾ ಆಗಿ ಹೋಗುವವು; ನೀನು ಮುದಿ ಆದದರಿಂದ ಇನ್ನೊಂದು ಸ್ಥಳಕ್ಕೆ ಹೋಗಲಾರೆ; ಮತ್ತು ನಿನಗೆ ಆಹಾರವಿಲ್ಲದೆ, ಸತ್ತು ಹೋಗುತ್ತೀ ಎಂದು, ಎಷ್ಟು ಹೇಳಿದಾಗ್ಯೂ, ಕೇಳದೆ, ಅವುಗಳನ್ನು—ನಿಲ್ಲಿರೆಂದು, ಬಹಳ ಬಲವಂತಾ ಮಾಡಿತು. ಆಗ ಆ ಪಕ್ಷಿಗಳೆಲ್ಲಾ ಅಲ್ಲಿ ನಿಂತು, ಆ ಕೆರೆಯಲ್ಲಿ ಪ್ರವೇಶಿಸಿ, ಮೀನುಗಳೆಲ್ಲಾ ತಿಂದು ಹಾಕಿ, ಆ ಮುದಿ ಬಕ ಪಕ್ಷಿಯಿಂದ ಅಪ್ಪಣೆ ತೆಗೆದು ಕೊಂಡು, ಹೊರಟು ಹೋದವು. ಆ ಕೆರೆಯಲ್ಲಿ ನೀರು ಸ್ವಲ್ಪವಾಗಿ ಇದ್ದದರಿಂದ, ನೀರೆಲ್ಲಾ ಬತ್ತಿ ಹೋಯಿತು. ಆ ಬಕವು ಆ ಸ್ಥಳವನ್ನು ಬಿಟ್ಟು, ಮತ್ತೊಂದು ಸ್ಥಳಕ್ಕೆ ಹೋಗಲಾರದೆ; ಅಲ್ಲಿಯೂ ಆಹಾರವಿಲ್ಲದೆ ಸತ್ತು ಹೋಯಿತು. ಆದಕಾರಣ ತನಗೆ ಇರಿಸಿ ಕೊಳ್ಳದೆ, ಇದ್ದದ್ದೆಲ್ಲಾ ಪರರ ಉಪಕಾರಕ್ಕೋಸ್ಕರವಾಗಿ ವ್ರಯಾ ಮಾಡಿದರೆ, ತಾನೇ ಕೆಟ್ಟು ಹೋಗುವನು.

## ೬೨. ಕಥೆ.

### ವರ್ತಕನ ಮಗನನ್ನು ಕುರಿತದ್ದು.

ಮಹಿಳಾಪುರವೆಂಬ ಪಟ್ಟಣದಲ್ಲಿ ಒಬ್ಬ ವರ್ತಕನು ಇದ್ದನು. ಅವನಿಗೆ ಚಂದ್ರಮುಖಿ ಎಂಬ ಹೆಂಡತಿ ಇರುವಳು. ಈ ಇಬ್ಬರಿಗೂ ಸುಮತಿ ಎಂಬ ಮಗನು ಹುಟ್ಟಿದನು. ಆ ಕುಮಾರನು ಐದು ವರುಷದ ವಯಸ್ಸುಳ್ಳವನಾಗಿ ಇರಲಾಗಿ; ಆ ವರ್ತಕನು ಸತ್ತು ಹೋದನು. ಆ ಮೇಲೆ ಅವನ ಹೆಂಡತಿಗೂ ಮಗನಿಗೂ ದಿಕ್ಕು ಇಲ್ಲದೆ ಹೋದ್ದರಿಂದ, ಅವಳು ಮಗನನ್ನು ಕರೆದು ಕೊಂಡು, ತನ್ನ ಗಂಡನ ಸ್ನೇಹಿತನಾದ ಇನ್ನೊಬ್ಬ ವರ್ತಕನ ಬಳಿಗೆ ಹೋಗಿ, ಆತನೊಡನೆ ತನ್ನ ವೃತ್ತಾಂತವೆಲ್ಲಾ ಹೇಳಲು; ಆತನು ಅವರನ್ನು ಆದರಿಸಿ, ತನ್ನ ಮನೆಯಲ್ಲಿ ಇಟ್ಟು ಕೊಂಡು, ಅನ್ನವಸ್ತ್ರಗಳನ್ನು ಕೊಟ್ಟು, ಕಾಪಾಡುತ್ತಾ ಇದ್ದನು. ಆ ಚಿಕ್ಕವನು ಕೆಲವು ದಿವಸಗಳೊಳಗೆ ಓದ ತಕ್ಕದ್ದರಲ್ಲಿಯೂ, ಬರಿಯ ತಕ್ಕದ್ದರಲ್ಲಿಯೂ, ಬಹು ಸಮರ್ಥನಾದನು. ಆಗ ತಾಯಿ ಮಗನನ್ನು ನೋಡಿ, ನೀನು ಸಕಲ ವಿದ್ಯೆಗಳಲ್ಲಿಯೂ ಪ್ರವೀಣನಾಗಿದ್ದೀ; ಇನ್ನು ಮೇಲೆ ನೀನು ಏನಾದರೂ ಉದ್ಯೋಗವನ್ನು ಮಾಡಿ, ಬದುಕ ಬೇಕೇ ಹೊರ್ತು, ಈ ವರ್ತಕನ ಮನೆಯಲ್ಲೇ ಇರುವದು ಯುಕ್ತವಲ್ಲ; ನಮ್ಮ ಹಿರಿಯರು ಬಹು ದಿನಗಳಿಂದ ವರ್ತಕತನದಲ್ಲಿಯೇ ಜೀವನಾ ಮಾಡುತ್ತಾ ಇದ್ದರು; ಆದಕಾರಣ ನೀನು ಹಾಗೆ ಮಾಡಿದರೆ, ಚನ್ನಾಗಿರುವದು. ಅದಕ್ಕೆ ನೀನು ಮಾಡ ತಕ್ಕ ಪ್ರಯತ್ನ ಏನಂದರೆ— ಇಲ್ಲಿಗೆ ಸಮೀಪವಾಗಿ ಕುಂಡಿನ ಪು

ರವೆಂಬ ಪಟ್ಟಣದಲ್ಲಿ ಧರ್ಮಪಾಲಕನೆಂಬ ವರ್ತಕನು ಇದ್ದಾನೆ; ತನ್ನ ಕುಲಸ್ಥರು ಯಾರಾದರೂ ಬಂದು, ತಮ್ಮ ಕಷ್ಟ ಕಾರ್ಪಣ್ಯಗಳನ್ನು ಹೇಳಿ ಕೊಂಡರೆ, ಅವರನ್ನು ಆದರಿಸಿ, ಅವರು ವರ್ತಕತನ ಮಾಡುವದಕ್ಕೆ ಬೇಕಾದಷ್ಟು ದ್ರವ್ಯವನ್ನು ಕೊಡುತ್ತಾನಂತೆ; ಆದಕಾರಣ ನೀನು ಆತನ ಬಳಿಗೆ ಹೋಗಿ, ಆಶ್ರಯ ಮಾಡಿದರೆ, ಸುಖ ಪಡುತ್ತೀ ಎಂದು ಹೇಳಲಾಗಿ; ಅವನು ತಾಯಿಯಿಂದ ಅಪ್ಪಣೆ ತೆಗೆದು ಕೊಂಡು, ಆ ವರ್ತಕನ ಮನೆಗೆ ಹೋದನು. ಆಗ ಆ ವರ್ತಕನು, ಅದಕ್ಕೆ ಮುಂಚಿತವಾಗಿ ತನ್ನ ಬಳೀಲಿ ಸಾರಿ ಸಾರಿಗೂ ಹಣ ತೆಗೆದು ಕೊಂಡು ಹೋಗಿ, ಎಲ್ಲಾ ನಾಶನಾ ಮಾಡಿ, ತಿರಿಗಿ ಸ್ವಲ್ಪ ಧನವು ಕೊಡು ಎಂದು, ಹೇಳ ಬಂದ ಒಬ್ಬ ಕೋಮಟಿಯನ್ನು ನೋಡಿ, ಎಲೋ, ನೀನು ಕೇಳಿದ ಹಾಗೆ ಎಲ್ಲಾ ನಾನು ಹಣವನ್ನು ಕೊಟ್ಟೆನು; ನೀನು ಸ್ವಲ್ಪವಾದರೂ ಲಾಭ ಸಂಪಾದಿಸಿ ಕೊಳ್ಳದೆ, ಎಲ್ಲಾ ಖರ್ಚು ಮಾಡಿ, ತಿರಿಗಿ ಹಣವನ್ನು ಕೇಳ ಬಂದಿ; ಬುದ್ಧಿವಂತನಾದವನು ಸತ್ತು ಹೋದ ಹೆಗ್ಗಣವನ್ನಾದರೂ ಮೂಲ ಧನವಾಗಿ ಇಟ್ಟು ಕೊಂಡು, ಅದರಿಂದ ಭಾಗ್ಯವಂತನಾಗುವದಿಲ್ಲವೇ? ನೀನು ಬುದ್ಧಿಹೀನನು; ನಿನಗೆ ಹಣವನ್ನು ಕೊಡುವದು ಇಲ್ಲವೆಂದು ಹೇಳಿ, ಅವನನ್ನು ಧಿಕ್ಕರಿಸುತ್ತಾ ಇದ್ದನು. ಆ ಚಿಕ್ಕವನು ಆ ಮಾತುಗಳನ್ನು ಕೇಳಿ, ಆತನ ಸಮೀಪದಲ್ಲಿ ನಿಂತು, ನನಗೆ ಆ ಹೆಗ್ಗಣವನ್ನಾದರೂ ಕೊಡಿಸಿರಿ ಎಂದು ಕೇಳಲಾಗಿ; ಆತನು ತನ್ನನ್ನು ಅಪಹಾಸ್ಯ ಮಾಡುವದಕ್ಕೆ ಬಂದನೆಂದು ಕೋಪಿಷ್ಠನಾಗಿ, ಸತ್ತ ಹೆಗ್ಗಣವನ್ನು ಆ ಹುಡುಗನ ಕೈಗೆ ಕೊಡಿಸಿ, ಹೋಗು, ಎಂದು ಹೇಳಿದನು. ಆ ಮೇಲೆ ಆ

ಚಿಕ್ಕವನು ಆ ಹೆಗ್ಗಣವನ್ನು ತೆಗೆದು ಕೊಂಡು ಹೋಗಿ, ಪೇಟೆಯಲ್ಲಿ ಇಟ್ಟು ಕೊಂಡು, ಕೂತು ಇರಲಾಗಿ; ಒಬ್ಬನು ತಾನು ಸಾಕುವ ಬೆಕ್ಕಿಗೆ ಆಹಾರದ ನಿಮಿತ್ತವಾಗಿ ಒಂದು ಶೇರು ಕಡಲೇ ಗುಗ್ಗುರಿಯನ್ನು ಕೊಟ್ಟು, ಆ ಹೆಗ್ಗಣವನ್ನು ತೆಗೆದು ಕೊಂಡು ಹೋದನು. ಆ ಮೇಲೆ ಆ ಹುಡುಗನು ಆ ಗುಗ್ಗುರಿಯನ್ನೂ ಒಂದು ಗಡಿಗೆಯಲ್ಲಿ ನೀರನ್ನೂ ಇಟ್ಟು ಕೊಂಡು, ಊರಿಗೆ ಸಮೀಪವಾಗಿ ಮರದ ಕೆಳಗೆ ಕೂತು ಕೊಂಡು, ಆ ಮಾರ್ಗದಲ್ಲಿ ಆಯಾಸದಿಂದ ಬರುವ ಕಟ್ಟಿಗೆ ಹೊರೆಯುವರಿಗೆ ಆ ಗುಗ್ಗುರಿಯಲ್ಲಿ ಸ್ವಲ್ಪ ಕುಡಿಯುವದಕ್ಕೆ ನೀರು ಕೊಡುತ್ತಾ ಇದ್ದನು. ಅವರು ಆ ಗುಗ್ಗುರಿಯನ್ನು ತಿಂದು, ನೀರಡಿಕೆಯನ್ನು ತೀರಿಸಿ ಕೊಂಡು ಹೋಗುವಾಗ, ಅವನಿಗೆ ಒಂದೊಂದು ಕಟ್ಟಿಗೆ ಕೊಟ್ಟು, ಹೋದರು. ಆ ದಿನದಲ್ಲಿ ಕೊಟ್ಟ ಕಟ್ಟಿಗೆ ಎಲ್ಲಾ ಮಾರಿ, ಅದರಿಂದ ಬಂದ ಹಣವನ್ನು ಖರ್ಚು ಮಾಡಿ, ಬಹಳವಾಗಿ ಗುಗ್ಗುರಿಯನ್ನು ಕೊಂಡು, ಅದೇ ಪ್ರಕಾರ ನಡಿಸುತ್ತಾ ಬಂದನು. ಹೀಗೆ ಸ್ವಲ್ಪ ಕಾಲ ಕಳೆದ ಮೇಲೆ, ಅವನು ವಿಸ್ತಾರವಾಗಿ ಕಟ್ಟಿಗೆಯನ್ನು ಶೇರಿಸಿ, ಅವೆಲ್ಲಾ ಮಾರಿ, ಆ ಹಣಕ್ಕೆಲ್ಲಾ ಹೊರೆಗಳನ್ನು ಕೊಂಡು, ಮನೆಗೆ ತೆಗೆದು ಕೊಂಡು ಹೋದನು. ಆ ಮೇಲೆ ಆ ದಿನ ಮೊದಲ್ಗೊಂಡು ಎಂಟು ದಿವಸಗಳ ಮಟ್ಟಿಗೂ ಬಹಳ ಮಳೆ ಸುರಿಯುತ್ತಾ ಇರಲಾಗಿ, ಆ ಪಟ್ಣದಲ್ಲಿ ಎಲ್ಲಿಯೂ ಕಟ್ಟಿಗೆ ಶಿಕ್ಕದೆ ಹೋಯಿತು. ಈ ಹುಡುಗನು ಕೂಡಿಸಿ ಇದ್ದ ಕಟ್ಟಿಗೆ ಹೊರೆಗಳೆಲ್ಲಾ ಬಹು ಲಾಭವಾಗಿ ಮಾರಿ, ಅದರಿಂದ ವಿಸ್ತಾರ ಹಣವನ್ನು ಸಂಪಾದಿಸಿ, ಸುಖವಾಗಿ ಇದ್ದನು. ಆದಕಾರಣ ಬುದ್ಧಿವಂತನಾದವನು ಹ್ಯಾಗಾದರೂ ಸುಖ ಪಡುವನು.

## ೭೩. ಕಥೆ.

ಬೇರೆ ಬೇರೆ ಪಾಠಾ ಮಾಡಿಸಿದ ಎರಡು ಗಿಳಿಗಳನ್ನು ಕುರಿತದ್ದು.

ವಿಂಧ್ಯ ಪರ್ವತದಲ್ಲಿ ಒಂದು ಆಲದ ಮರದ ಮೇಲೆ ಒಂದು ಹೆಣ್ಣು ಗಿಳಿಯೂ ಒಂದು ಗಂಡು ಗಿಳಿಯೂ ಸಂಸಾರ ಮಾಡುತ್ತಾ ಇರುವವು. ಆ ಎರಡಕ್ಕೂ ರಾಮ ಗಿಳಿ ಎಂಬದಾಗಿಯೂ ಲಕ್ಷ್ಮಣ ಗಿಳಿ ಎಂಬದಾಗಿಯೂ ಎರಡು ಮರಿಗಳು ಹುಟ್ಟಿ ಇರಲಾಗಿ; ಅಲ್ಲಿಗೆ ಒಬ್ಬ ಬೆಸ್ತನು ಬಂದು, ಬಲೆಯನ್ನು ಬೀಸಿ, ಆ ಎರಡು ಮರಿಗಳನ್ನು ಹಿಡು ಕೊಂಡು, ಹೋಗಿ, ಗೋದಾವರೀ ತೀರದಲ್ಲಿ ಒಬ್ಬ ಬ್ರಾಹ್ಮಣನಿಗೆ ಒಂದು ಮರಿಯನ್ನು, ಮತ್ತೊಂದನ್ನು ಕಟಕರವನಿಗೆ ಮಾರಿ ಬಿಟ್ಟನು. ಅವರಿಬ್ಬರು ಆ ಗಿಳಿ ಮರಿಗಳನ್ನು ತಮ್ಮ ತಮ್ಮ ಮನೆಗಳಿಗೆ ತೆಗೆದು ಕೊಂಡು ಹೋಗಿ, ಅವುಗಳಿಗೆ ಮಾತುಗಳನ್ನು ಕಲಿಸಿ, ಬಹಳ ಪ್ರೇಮದಿಂದ ಅವುಗಳನ್ನು ಸಾಕುತ್ತಾ ಬಂದರು. ಆ ಮೇಲೆ ಅವುಗಳ ತಾಯಿ ತಂದೆಗಳಾದ ಮುದಿ ಗಿಳಿಗಳು ತಮ್ಮ ಮರಿಗಳನ್ನು ಕಾಣದೆ, ವ್ಯಸನ ಪಟ್ಟು, ಏನೂ ತೋರದೆ, ಕೆಲವು ದಿವಸಗಳ ತರುವಾಯ ತಮ್ಮ ಮರಿಗಳನ್ನು ಹುಡುಕುವದಕ್ಕೆ ಆರಂಭಿಸಿ, ಅರಣ್ಯಗಳಲ್ಲಿಯೂ, ಬೆಟ್ಟಗಳಲ್ಲಿಯೂ, ಮರಗಳಲ್ಲಿಯೂ, ಸರೋವರಗಳಲ್ಲಿಯೂ, ಗ್ರಾಮಗಳಲ್ಲಿಯೂ, ದೊಡ್ಡ ಭಾವಿಗಳಲ್ಲಿಯೂ, ಕೆರೆಗಳಲ್ಲಿಯೂ, ನದಿಗಳಲ್ಲಿಯೂ, ತೋಟಗಳಲ್ಲಿಯೂ, ಮನೆಗಳಲ್ಲಿಯೂ, ಗುಡಿಗಳಲ್ಲಿಯೂ, ಉಪ್ಪರಿಗೆಗಳಲ್ಲಿಯೂ, ಮುಂತಾದ ಸ್ಥಳಗಳೆಲ್ಲಾ ರಾತ್ರಿ ಹಗಲೂ ಹುಡುಕುತ್ತಾ, ಸ್ವಲ್ಪ ಕಾಲಕ್ಕೆ ಗೋದಾವರೀ ತೀರಕ್ಕೆ

ಬಂದು, ಬ್ರಾಹ್ಮಣನ ಬಳಿಯಲ್ಲಿಯೂ ಕಟಕರವನ ಬಳಿಯಲ್ಲಿಯೂ ಮುದ್ದು ಮುದ್ದಾಗಿ ಮಾತನಾಡುತ್ತಾ, ಪಂಜರಗಳಲ್ಲಿ ಇರುವ ಮರಿಗಳನ್ನು ಕಂಡು, ಮನಸ್ಸಿನಲ್ಲಿ ಬಹಳ ಸಂತೋಷವನ್ನು ಹೊಂದಿ, ಆ ಬ್ರಾಹ್ಮಣನ ಬಳಿಗೆ ಹೋಗಿ, ಇವು ನಮ್ಮ ಮರಿಗಳೆಂದು ತಿಳಿಸಲು; ಆ ಬ್ರಾಹ್ಮಣನು ಮುದಿ ಗಿಳಿಗಳನ್ನು ಆದರಿಸಿ, ತನ್ನ ಬಳಿಯ ಕೆಲವು ದಿವಸಗಳು ಇಟ್ಟುಕೊಂಡು ಇದ್ದು, ತಾನು ಸಾಕಿ ಇದ್ದ ರಾಮ ಗಿಳಿಯನ್ನೂ ಮತ್ತು ಆ ಕಟಕರವನ ಬಳೀಲಿ ಇದ್ದ ಲಕ್ಷ್ಮಣ ಗಿಳಿಗೆ ಸ್ವಲ್ಪ ದ್ರವ್ಯವನ್ನು ಕೊಟ್ಟು, ಅದನ್ನೂ, ಈ ಎರಡು ಗಿಳಿಗಳನ್ನೂ ಆ ಮುದಿ ಗಿಳಿಗಳಿಗೆ ಕೊಟ್ಟು ಕಳುಹಿಸಿ ಬಿಟ್ಟನು. ಆ ಮೇಲೆ ಮರಿಗಳೊಡನೆ ತಮ್ಮ ಸ್ಥಳವನ್ನು ಶೇರಿ, ಸ್ವಲ್ಪ ಕಾಲವು ಸಂತೋಷವಾಗಿದ್ದು, ಮತ್ತು ಕೆಲವು ದಿನಗಳ ತರುವಾಯ ಮೃತಿ ಹೊಂದಿದವು. ಆ ತರುವಾಯ ರಾಮ ಗಿಳಿಗೂ ಲಕ್ಷ್ಮಣ ಗಿಳಿಗೂ ಒಂದು ಸ್ಥಳದಲ್ಲಿ ಇರುವದಕ್ಕೆ ಸರಿ ಬೀಳದೆ ಹೋದ್ದರಿಂದ, ರಾಮ ಗಿಳಿಯೂ ಆ ಸ್ಥಳವನ್ನು ಬಿಟ್ಟು, ಒಂದು ಗಾವದ ಆಚೇಲಿ ಒಂದು ಮಾವಿನ ಮರದ ಮೇಲೆ ಗೂಡು ಮಾಡಿ ಕೊಂಡು ಇತ್ತು. ಹೀಗೆ ಇರುವಾಗ, ಒಬ್ಬ ಬ್ರಾಂಹ್ಮಣನು ಗಂಗಾ ಸ್ನಾನ ಮಾಡ ಬೇಕೆಂದು ನೆನಸಿ, ಹೋಗುತ್ತಾ ಇರುವಾಗ, ಬಿಸಲಿನಲ್ಲಿ ಆಯಾಸ ಪಟ್ಟು, ಆ ಲಕ್ಷ್ಮಣ ಗಿಳಿ ಇರುವ ಮರದ ಕೆಳಗೆ ಕೂತು ಕೊಳ್ಳ ಬೇಕೆಂದು, ಬಂದನು. ಆಗ ಆತನನ್ನು ನೋಡಿ, ಲಕ್ಷ್ಮಣ ಗಿಳಿಯು ಇತರ ಪಕ್ಷಿಗಳನ್ನು ಕರೆದು, ಇಗೋ, ಮನುಷ್ಯ ಬಂದ ಹಾಗೆ ಇಧೆ; ಅವನ ಕಣ್ಣುಗಳನ್ನು ತಿವಿಯಿರಿ; ಕುತ್ತಿಗೆಯನ್ನು

ಮುರಿಯಿರಿ; ಕಾಲುಗಳನ್ನು ಕಡಿಯಿರಿ; ತಿಂದು ಹಾಕೋಣ ಎಂಬದಾಗಿ, ಘಟ್ಟಿಯಾಗಿ ಕೂಗಿತು. ಆ ಧ್ವನಿಯನ್ನು ಕೇಳಿ, ಆ ಬ್ರಾಹ್ಮಣನು ಅಲ್ಲಿ ನಿಲ್ಲುವದಕ್ಕೆ ಭಯ ಪಟ್ಟು, ಓಡಿ ಹೋಗಿ, ರಾಮು ಗಿಳಿ ಇರುವ ಮರದ ಕೆಳಕ್ಕೆ ಬಂದನು. ಆತನನ್ನು ನೋಡಿ, ಆ ಗಿಳಿ ಇತರ ಗಿಳಿಗಳನ್ನು ಕರೆದು, ಬ್ರಾಹ್ಮಣನು ಆಯಾಸದಿಂದ ಬಂದಿದ್ದಾನೆ; ಎಳೇ ಚಿಗುರುಗಳನ್ನು ಕೊಯಿದು, ಕೆಳಗೆ ಹಾಕಿರಿ; ತಣ್ಣಗೆ ಕೂತು ಕೊಳ್ಳಲಿ; ಒಳ್ಳೇ ಹಣ್ಣುಗಳನ್ನು ಕೊಯಿದು, ಕೊಡಿರಿ; ತಿನ್ನಲಿ; ಆತಗೆ ಚನ್ನಾಗಿ ಉಪಚಾರವನ್ನು ಮಾಡಿರಿ, ಎಂದು ಘಟ್ಟಿಯಾಗಿ ಕೂಗಿ, ಹೇಳಿತು. ಆಗ ಆ ಬ್ರಾಹ್ಮಣನು ಸಂತೋಷವನ್ನು ಹೊಂದಿ, ಮುಂಚಿತವಾಗಿ ಒಂದು ಗಿಳಿ ನನ್ನನ್ನು ಸಂಹರಿಸಿರಿ ಎಂದು ಕೂಗಿತಲ್ಲಾ; ಅದು ಯಾವದು? ಅದರ ಸಂಗತಿ ಏನೆಂದು, ರಾಮು ಗಿಳಿಯನ್ನು ಕೇಳಲಾಗಿ; ಆ ಗಿಳಿಯೂ ನಾವೂ ಅಣ್ಣ ತಮ್ಮಂದಿರು; ಆದರೆ ನಾನು ಬ್ರಾಹ್ಮಣನ ಮನೆಯಲ್ಲಿ ಬೆಳೆದೆನು; ಅದರಿಂದ ನನಗೆ ಇಂಥಾ ಉತ್ತಮವಾದ ಗುಣಗಳು ಉಂಟಾಯಿತು. ಆ ಗಿಳಿ ಕಟಕರವನ ಮನೆಯಲ್ಲಿ ಬೆಳೆಯಿತು; ಅವನು ಮೇಕೆಗಳನ್ನೂ ಕುರಿಗಳನ್ನೂ ಕೊಲ್ಲುತ್ತಾ ಇರುವಾಗ, ನೋಡುತ್ತಾ ಇದ್ದದರಿಂದ, ಈ ನೀಚ ಬುದ್ಧಿ ಅದಕ್ಕೆ ಬಂತು ಎಂದು, ರಾಮು ಗಿಳಿ ಹೇಳಿತು. ಆದಕಾರಣ ದುರ್ಮಾರ್ಗರ ಸಹವಾಸವನ್ನು ಮಾಡಿದರೆ, ದುರ್ಬುದ್ಧಿಯೇ ಬರುವದು. ಸನ್ಮಾರ್ಗರ ಸಹವಾಸ ಮಾಡಿದರೆ, ಸುಬುದ್ಧಿಯೇ ಉಂಟಾಗುವದು.

## ೬೪. ಕಥೆ.

### ಅರಸನನ್ನೂ ಅವನ ಆಪ್ತ ಪಂಡಿತನನ್ನೂ ಕುರಿತದ್ದು.

ವೀರಮಹೇಂದ್ರನೆಂಬ ರಾಯನು ಇದ್ದನು. ಆತನ ಬದೀಲಿ ವಿದ್ವಾಂಸರು ಅನೇಕ ಜನ ಉಂಟು. ಅವರಲ್ಲಿ ಭರ್ಜವೆಂಬಾತನು ತರ್ಕ ವ್ಯಾಕರಣ ಮುಂತಾದ ಶಾಸ್ತ್ರಗಳನ್ನು ಓದಿದವನು; ಸಕಲ ಶಾಸ್ತ್ರಗಳೂ ತಿಳಿಯುವದೇ ಹೊರ್ತು, ಲೌಕೀಕ ಸಂಧಾನ ತಿಳಿದಾತನಲ್ಲ. ಕಡಿಮೆ ವಿದ್ವಾಂಸರೆಲ್ಲಾ ಶಾಸ್ತ್ರಗಳನ್ನು ಬಹಳ ಓದದೆ ಇದ್ದಾಗ್ಯೂ, ಲೌಕೀಕ ಸಂಧಾನ ಚನ್ನಾಗಿ ತಿಳಿಯುವದು. ಆದಕಾರಣ ಶಾಸ್ತ್ರಗಳನ್ನು ಓದಿದವರ ಹಾಗೆ ರಾಯನೊಡನೆ ಯಾವಾಗಲೂ ಬಹಳವಾಗಿ ಮಾತನಾಡುತ್ತಾ ಇರುವರು. ಭರ್ಜ ಎಂಬವನು ಬಹು ಸಾತ್ವಿಕನಾದ ಕಾರಣ, ರಾಯನು ಕೇಳಿದ ಮಾತುಗಳಿಗೆ ಉತ್ತರ ಹೇಳುವನೇ ಹೊರ್ತು, ವ್ಯರ್ಥವಾದ ಮಾತುಗಳನ್ನು ಆಡುವದು ಇಲ್ಲ. ರಾಯನು ಸಮಸ್ತ ಶಾಸ್ತ್ರಗಳನ್ನೂ ಸಮಸ್ತ ವಿದ್ಯಾ ಪರಿಕ್ಷೆಗಳನ್ನೂ ಬಲ್ಲವನಾದ್ದರಿಂದ, ಭರ್ಜ ದೊಡ್ಡ ವಿದ್ವಾಂಸನೆಂದು ತಿಳು ಕೊಂಡು, ಆತನಲ್ಲಿ ಬಹಳ ಪ್ರೀತಿ ಮಾಡುತ್ತಾ ಇದ್ದನು. ಅದನ್ನು ನೋಡಿ, ಮಿಕ್ಕಾದ ವಿದ್ವಾಂಸರು ಸಹಿಸಲಾರದೆ, ರಾಯನೊಡನೆ ಭರ್ಜವಿನ ಮೇಲೆ ದೂರುಗಳು ಹೇಳುತ್ತಾ ಬಂದರು. ರಾಯನು ತಿಳಿದವನಾದಕಾರಣ, ಅವರು ಎಷ್ಟು ಕ್ಷುದ್ರದ ಮಾತುಗಳನ್ನು ಹೇಳಿದಾಗ್ಯೂ, ಕೇಳದೆ, ಭರ್ಜವಿನಲ್ಲಿ ಬಹಳ ಗುರುತ್ವವನ್ನು ನಡಿಸುತ್ತಾ ಬಂದನು. ಆ ಮೇಲೆ ಆ ವಿದ್ವಾಂಸರೆಲ್ಲರೂ ಕೂಡಿ, ಆಲೋಚನೆಯನ್ನು ಮಾಡಿ, ರಾಯನ

ಅರಮನೆಯ ಬಾಗಲಲ್ಲಿರುವ ದ್ವಾರಪಾಲಕರಿಗೆ ಲಂಚವನ್ನು ಕೊಟ್ಟು, ಭರ್ಜ್ಞವನ್ನು ಅರಮನೇ ಒಳಕ್ಕೆ ಬಾರದ ಹಾಗೆ ಮಾಡಿದರು. ಈ ಪ್ರಕಾರ ನಾಲ್ಕಾರು ದಿನಗಳು ನಡದ ಮೇಲೆ, ಒಂದು ದಿನ ರಾಯನು ಆ ವಿದ್ವಾಂಸರನ್ನು ಕುರಿತು, ಭರ್ಜ್ಞವು ನಾಲ್ಕಾರು ದಿವಸಗಳಿಂದ ಯಾಕೆ ಬರಲಿಲ್ಲವೆಂದು, ಕೇಳಲಾಗಿ; ಯಾಕೋ? ನಮಗೆ ತಿಳಿಯಲಿಲ್ಲ; ನಾಳೆ ತಿಳು ಕೊಂಡು ಬಂದು, ನಿಮ್ಮೊಡನೆ ಹೇಳುತ್ತೇವೆಂದು ಅರಿಕೆ ಮಾಡಿ, ಮಾರಣೆ ದಿವಸ ರಾಯನನ್ನು ನೋಡಿ, ಭರ್ಜ್ಞವಿಗೆ ಶರೀರಕ್ಕೆ ಸಾಖ್ಯವಿಲ್ಲ, ಜ್ವರ ಬಂತು ಎಂದು ಹೇಳಲಾಗಿ; ರಾಯನು ತನ್ನ ಬದೀಲಿ ಇರುವ ವೈದ್ಯರನ್ನು ಕರಿಸಿ, ಭರ್ಜ್ಞವಿಗೆ ಜ್ವರ ಬಂತು ಅಂತೆ; ನೀವು ಹೋಗಿ, ನೋಡಿ, ಆತನಿಗೆ ಔಷಧವನ್ನು ಕೊಟ್ಟು ಬನ್ನಿ ಎಂಧೇಳಿ, ಕಳುಹಿಸಿದನು. ಆಗ ಆ ವಿದ್ವಾಂಸರು ಆ ವೈದ್ಯರಿಗೆ ಲಂಚವನ್ನು ಕೊಟ್ಟು, ತಮ್ಮೊಳಗೆ ಶೇರಿಸಿ ಕೊಂಡು, ಆ ವೈದ್ಯರು ನಿತ್ಯವೂ ರಾಯನ ಬಳಿಗೆ ಬಂದು, ಒಂದು ದಿನ, ಚನ್ನಾಗಿ ಇಧೆ ಎಂದೂ, ಇನ್ನೊಂದು ದಿನ ಚನ್ನಾಗಿ ಇಲ್ಲವೆಂದೂ, ಮತ್ತೊಂದು, ದಿನ, ರೋಗ ಪ್ರಬಲವಾಯಿತೆಂದೂ, ಹೇಳುತ್ತಾ ಬಂದರು. ಈ ಪ್ರಕಾರ ಕೆಲವು ದಿವಸಗಳಾದ ಮೇಲೆ, ರಾಯನು, ಭರ್ಜ್ಞವನ್ನು ನೋಡ ಬೇಕು; ಪಾಲಕಿಯನ್ನು ತರಿಸಿರೆಂದು ಹೇಳಿ, ಪಾಲಕಿಯಲ್ಲಿ ಕೂತು ಕೊಂಡು, ಹೊರಡಲು; ಆ ವಿದ್ವಾಂಸರಲ್ಲಿ ಕೆಲಬರು ಬಹಳ ದುಃಖದಿಂದ ರಾಯನ ಬಳಿಗೆ ಬಂದು, ಭರ್ಜ್ಞವು ಈಗಲೇ ಸತ್ತು ಹೋದನು ಎಂದು ಹೇಳಲಾಗಿ; ರಾಯನು ಬಹು ದುಃಖಿತನಾಗಿ, ಸತ್ತು ಹೋದ ಭರ್ಜ್ಞವನ್ನಾದರೂ ನೋಡಿ ಬ

ರುತ್ತೇನೆಂದು ಹೊರಟಾಗ, ಅಯ್ಯಾ, ತಾವು ರಾಜ್ಯ ಪಾಲನೆ ಮಾಡುವವರು; ಸತ್ತು ಹೋದವರನ್ನು ನೋಡುವದು ಯುಕ್ತವಲ್ಲ ಎಂಬದಾಗಿ, ಹೇಳುತ್ತಾ ಬಂದರು. ಅವರ ಮಾತುಗಳು ಮೀರಲಾರದೆ, ರಾಯನು ಅರಮನೆಯನ್ನು ಹೊಕ್ಕು, ಬಹಳ ದುಃಖ ಪಡುತ್ತಾ ಇದ್ದನು. ಆ ಮೇಲೆ ವಿದ್ವಾಂಸರೆಲ್ಲರು ಅರಸನ ದುಃಖವನ್ನು ಪರಿಹಾರ ಮಾಡುತ್ತಾ ಬಂದರು. ಅನಂತರದಲ್ಲಿ ಭರ್ಜನು ವಿದ್ವಾಂಸರೆಲ್ಲರು ತನ್ನ ಮೇಲೆ ಮಾಡಿದ ಮೋಸಗಳನ್ನು ತಿಳು ಕೊಂಡು, ಒಂದು ದಿನ ರಾಯನು ಪಟ್ಣದ ಹೊರಗೆ ಬಂದಿರುವ ಸಮಯವನ್ನು ನೋಡಿ, ಯಾರಿಗೂ ತಿಳಿಯದ ಹಾಗೆ ದಾರಿಯಲ್ಲಿ ಒಂದು ಮರದ ಮೇಲೆ ಕೂತು ಕೊಂಡು, ಮಾತನಾಡ ಬೇಕೆಂದು ಇರಲಾಗಿ; ರಾಯನು ಆ ಮರದ ಸಮೀಪಕ್ಕೆ ಬರಲು; ಎಲೇ, ಮಹಾರಾಯನೇ, ಈ ವಿದ್ವಾಂಸರೆಲ್ಲರು ನನ್ನ ಮೇಲೆ ದ್ವೇಷದಿಂದ ನನ್ನನ್ನು ನಿಮ್ಮ ಬಳಿಗೆ ಬಾರದ ಹಾಗೆ ಮಾಡಿ, ನನ್ನನ್ನು ಕುರಿತು, ಸತ್ತು ಹೋದನೆಂದು, ಸುಳ್ಳು ಸಮಾಚಾರ ಹುಟ್ಟಿಸಿ, ನಿಮಗೂ ತಿಳಿಸಿದ್ಧಾರೆ; ನನ್ನನ್ನು ಸಂರಕ್ಷಣೆ ಮಾಡಯ್ಯಾ, ಮಹಾ ರಾಯಾ, ಎಂದು ಹೇಳಿ, ಘಟ್ಟಿಯಾಗಿ ಕೂಗಿದನು. ಆಗ ಆ ವಿದ್ವಾಂಸರು ಹತ್ತರ ಇದ್ದರಾದಕಾರಣ, ಅವನ ಮಾತುಗಳು ರಾಯನಿಗೆ ತಿಳಿಯದ ಹಾಗೆ ಇರ ತಕ್ಕ ಬಗ್ಯೆ, ತಾವೆಲ್ಲರು ಘಟ್ಟಿಯಾಗಿ ಪ್ರಸಂಗವನ್ನು ಮಾಡಿದರು. ರಾಯನು ಆ ಮಾತು ಕೇಳಿ, ಇದೇನು? ಭರ್ಜನು ಮಾತಾಡಿದ ಹಾಗೆ ಕೇಳ ಬಂತು; ವಿಚಾರಿಸಿರಿ ಎಂದು ಹೇಳಲಾಗಿ; ಆ ವಿದ್ವಾಂಸರು, ಕೇಳಯ್ಯಾ, ರಾಯಾ, ಭರ್ಜನು ಸತ್ತು, ಪಿಶಾಚನಾಗಿ ಈ ಮರ

ದ ಮೇಲೆ ಇದ್ಧಾನೆ. ಆ ಮಾತುಗಳ ಕೇಳ ಬೇಡಿರಿ, ಎಂದು ಹೇಳಿದರು. ಆ ಮೇಲೆ ಭರ್ಜುವಿಗೆ ಮಾತಾಡು ವದಕ್ಕೆ ಸಮಯ ಶಿಕ್ಕದೆ ಹೋಯಿತು. ಆದಕಾರಣ ಅ ರಸುಗಳ ಬದೀಲಿ ವಿದ್ವಾಂಸರು ಇದ್ದರೆ, ಪ್ರಬಲ ವಿದ್ವಾಂ ಸರಾದವರನ್ನು ಶೇರಲೀಸರು.

## ೬೫. ಕಥೆ.

### ಅಪಜಯ ಹೊಂದಿದ ಅರಸನನ್ನೂ ಅವನ ಮಂತ್ರಿಯನ್ನೂ ಕುರಿತದ್ದು.

ವಿಶಾಲಪುರವೆಂಬ ಪಟ್ಣದಲ್ಲಿ ಒಬ್ಬ ರಾಯನು ಇದ್ದ ನು. ಆತನು ನ್ಯಾಯ ತಪ್ಪದೆ, ಆಡಿದ ಮಾತು ನಡಿಸು ತ್ತಾ, ರಾಜ್ಯವನ್ನಾಳುತ್ತಿರುವಾಗ; ಆತನಿಗೆ ಶತ್ರುಗಳಾದ ಅರಸುಗಳು ಅವನ ಮೇಲೆ ಯುದ್ಧಕ್ಕೆ ಬಂದು, ಪಟ್ಣ ವನ್ನು ಸುತ್ತಿ ಕೊಂಡ ಕಾರಣ, ಆ ಅರಸು ಅವರ ಸಂ ಗಡ ಜಗಳವನ್ನು ಮಾಡಿ, ಜಯಿಸಲಾರದೆ, ಪಟ್ಣವನ್ನು ಬಿಟ್ಟು, ಮಂತ್ರಿಯೊಡನೆ ಏಕಾಂಗಿಯಾಗಿ ಹೊರಟು, ಅ ರಣ್ಯದಲ್ಲಿ ಸಂಚಾರ ಮಾಡುತ್ತಾ, ಒಂದು ಕಡೆಯಾದ ರೂ ಸ್ಥಿರವಾಗಿ ನಿಲ್ಲದೆ, ಮುಳ್ಳುಗಳಲ್ಲಿಯೂ ಕಲ್ಲುಗಳಲ್ಲಿ ಯೂ, ಬರೀ ಕಾಲಲ್ಲಿ ನಡಿಯಲಾರದೆ, ಕ್ಷುತ್ತು ಪಿಪಾ ಸಾದಿಗಳಿಂದ ಬಳಲಿ, ಏನೂ ತೋಚದೆ, ಚಿಂತಾಕ್ರಾಂ ತನಾಗಿ, ಒಂದು ತಟಾಕದ ತೀರದಲ್ಲಿ ಸ್ವಲ್ಪ ಹೊತ್ತು ಕೂತು ಇದ್ದು, ಇಷ್ಟು ಕಷ್ಟ ಕಾಲದಲ್ಲಿಯೂ ಎಡೆ ಬಿ ಡದೆ ಸಂಗಡ ಬರುವ ಮಂತ್ರಿಯನ್ನು ನೋಡಿ, ಕಣ್ಣು ಗಳಲ್ಲಿ ನೀರು ಸೋರಿಸುತ್ತಾ, ಇಂತೆಂದನು;—ಓ ಮಂತ್ರಿ

ಯೇ, ನಮ್ಮ ರಾಜ್ಯವು ಪರ ರಾಯರ ವಶವಾಯಿತು; ಕುದುರೆಗಳು ಕಳದವು; ಆನೆಗಳು ಇಲ್ಲವಾಯಿತು.; ರಥಗಳು ಬಿಟ್ಟಿತು; ಪಲ್ಲಕಿಗಳು ಬಿತ್ತು; ಇಷ್ಟು ಕಷ್ಟವನ್ನು ಅನುಭವಿಸುವದಕ್ಕಿಂತ ನೀರಿನಲ್ಲಿ ಬಿದ್ದಾದರೂ, ಬೆಟ್ಟದ ಮೇಲಿನಿಂದ ಧುಮಿಕಿಯಾದರೂ, ಇನ್ನು ಅಗ್ನಿ ಗುಂಡದಲ್ಲ್ಯಾದರೂ ಪ್ರವೇಶ ಮಾಡಿ, ಸತ್ತು ಹೋಗುವದು ಮೇಲು ಎಂದು ನಿಶ್ಚಯವಾಗಿ ನೆನಸುತ್ತೇನೆಂದು, ಬಿಸುಸುಯ್ಯಲಾಗಿ; ಉತ್ತಮವಾದ ಪ್ರಧಾನಿಯು ಕೇಳಿ, ಅರಸನೊಡನೆ, ಅಯ್ಯಾ, ಕಾಲಗತಿಯಿಂದ ನಮ್ಮ ರಾಜ್ಯ ಹೋಯಿತೆಂದು, ನಾವು ಈಗ ಪ್ರಾಣ ತ್ಯಾಗವನ್ನು ಮಾಡಿದ್ದರಿಂದ ಸಾಧಿಸುವದು ಏನೂ ಇಲ್ಲ; ನಮಗೆ ಶತ್ರುಗಳಾದ ಅರಸುಗಳಿಗೂ ಹಗೆಯುವರುಂಟು; ಅವರೊಳಗೆ ನಾವು ಸ್ನೇಹವನ್ನು ಮಾಡಿ, ದಂಡು ಕಟ್ಟಿ ಕೊಂಡು, ಪುನಹಾ ಯುದ್ಧವನ್ನು ಮಾಡಿ, ಶತ್ರುಗಳನ್ನು ಜಯಿಸಿ, ನಮ್ಮ ರಾಜ್ಯವನ್ನು ನಾವು ಪುನಹಾ ಸ್ವಾಧೀನ ಮಾಡಿಕೊಳ್ಳೋಣ; ಹೋದ ರಾಜ್ಯ ಪುನಹಾ ಬರುವದಿಲ್ಲವೆಂದು, ಯಾವ ನಿಶ್ಚಯವು? ಅಮಾವಾಸ್ಯೆ ದಿನ ಕಳೆಗಳೆಲ್ಲಾ ಹೋಗಿ, ಚಂದ್ರನು ಕ್ಷಯಿಸಿ ಹೋಗುತ್ತಾನೆ; ಮತ್ತೂ ಶುಕ್ಲ ಪಕ್ಷದಲ್ಲಿ ಚಂದ್ರನು ದಿನೇ ದಿನೇ ವೃದ್ಧಿ ಹೊಂದುವದಿಲ್ಲವೇ? ಆ ಪ್ರಕಾರವೇ ನಮಗೆ ಸಾಖ್ಯ ಕಾಲ ಬಂದರೆ, ದೈವ ಸಹಾಯದಿಂದ ಎಲ್ಲಾ ಕಾರ್ಯವೂ ಸಾಖ್ಯವಾಗುವದೆಂದು, ಇಂಥಾ ಮಾತುಗಳಿಂದ ಅರಸಿಗೆ ವ್ಯಸನ ಪರಿಹಾರವನ್ನು ಮಾಡಿ, ಆತನು ನಿಶ್ಚಿಂತೆಯಿಂದ ಮಾಡ ತಕ್ಕ ಪ್ರಯತ್ನಗಳೆಲ್ಲಾ ಮಾಡಿ, ಬಹಳವಾಗಿ ಸೈನ್ಯವನ್ನು ಕೂಡಿಸಿ ಕೊಂಡು, ಪುನಹಾ ಶತ್ರುಗಳೊಡನೆ

ಯುದ್ಧವನ್ನು ಮಾಡಿ, ರಾಜ್ಯವನ್ನು ವಶಾ ಮಾಡಿ ಕೊಂಡು, ಪಟ್ಟಾಭಿಷಿಕ್ತನಾಗಿ ಮಂತ್ರಿಯೊಡನೆ ಸುಖದಿಂದ ರಾಜ್ಯ ಪಾಲನೆಯನ್ನು ಮಾಡುತ್ತಿದ್ದನು. ಆದಕಾರಣ ಅರಸುಗಳ ಬಳಿಯ ಬುದ್ಧಿವಂತರಾದ ಮಂತ್ರಿಗಳು ಇದ್ದರೆ, ಅರಸುಗಳಿಗೆ ಎಷ್ಟು ಆಪತ್ತು ಬಂದಾಗ್ಯೂ, ಅದಕ್ಕೆ ತಕ್ಕ ಉಪಾಯಗಳು ವಿಚಾರಿಸಿ, ನಿವಾರಣೆ ಮಾಡುವರು.

## ೬೬. ಕಥೆ.

### ಹಂಸೆಯನ್ನೂ ಬಕ ಪಕ್ಷಿಯನ್ನೂ ಕುರಿತದ್ದು.

ಕೃಷ್ಣಾ ತೀರದಲ್ಲಿ ಒಂದು ಬೂರುಗ ಮರದ ಮೇಲೆ ಒಂದು ಬಕವು ವಾಸಾ ಮಾಡುತ್ತಾ ಇರುವಲ್ಲಿ, ಆ ಮಾರ್ಗವಾಗಿ ಒಂದು ಹಂಸೆ ಹೋಗುತ್ತಾ ಇರಲು; ಆ ಬಕವು ನೋಡಿ, ಅದನ್ನು ಕರೆದು, ನಿನ್ನ ಶರೀರವೆಲ್ಲಾ ನನ್ನ ಶರೀರದ ಹಾಗೆಯೇ ಬೆಳ್ಳಗಿರುವದು; ಕಾಲೂ ಮೂಗೂ ಮಾತ್ರ ಕೆಂಪಗೆ ಇವೆ; ನಿನ್ನಂಥಾ ಪಕ್ಷಿಯನ್ನು ಇದು ವರಿಗೂ ಎಲ್ಲಿಯೂ ನೋಡಲಿಲ್ಲ; ನೀನ್ಯಾರು? ಎಲ್ಲಿಂದ ಬಂದಿ? ಎಂದು ಕೇಳಲು; ನಾನು ಹಂಸೆಯು; ಬ್ರಹ್ಮದೇವರ ಮಾನಸ ಸರೋವರದಲ್ಲಿ ವಾಸಿಸುವೆನು; ಅಲ್ಲಿಂದ ಬಂದೆನೆಂದು, ಹಂಸೆ ಹೇಳಲಾಗಿ; ಆ ಸ್ಥಳದಲ್ಲಿ ಏನೇನು ವಸ್ತುವುಗಳು ಉಂಟು? ಅಲ್ಲಿ ನಿಮಗೆ ಆಹಾರವೇನೆಂದು, ಬಕ ಪಕ್ಷಿ ಕೇಳಲು, ಹಂಸೆ ಇಂತೆಂದಿತು;— ಅಲ್ಲಿ ಇರುವ ವಸ್ತುಗಳೆಲ್ಲಾ ದೇವ ನಿರ್ಮಿತದಿಂದ ಉಂಟಾಗಿರುವದು; ಅಲ್ಲಿನ ಸೊಬಗೆಲ್ಲವು ವರ್ಣಿಸುವದಕ್ಕೆ ಶಕ್ಯ

ವಲ್ಲವು; ಆದಾಗ್ಯೂ ಅಲ್ಲಿ ಇರುವ ಮುಖ್ಯವಾದ ವಸ್ತುವುಗಳನ್ನು ತಿಳಿಸುವೆನು; ಕೇಳು; ಏನಂದರೆ, ಆ ಪ್ರಾಂತ್ಯದಲ್ಲಿ ಎಲ್ಲಿ ನೋಡಿದಾಗ್ಯೂ, ಸ್ವರ್ಣ ಮಯವಾದ ಭೂಮಿಯೂ, ಅಮೃತಕ್ಕೆ ಸರಿಯಾದ ನೀರೂ, ಭಂಗಾರದ ಕಮಲಗಳೂ, ಮುತ್ತುಗಳ ಮರಳು ರಾಶಿಗಳೂ, ಕೋರಿದ ಕೋರಿಕೆಗಳನ್ನು ಕೊಡುವಂಥಾ ಕಲ್ಪ ವೃಕ್ಷಗಳೂ; ಇವು ಮೊದಲಾದ ವಿಚಿತ್ರ ವಸ್ತುಗಳು ಅನೇಕಗಳುಂಟು; ಅಲ್ಲಿ ನಾವು ಚಿನ್ನದ ಕಮಲದ ನಾಳವನ್ನು ಭುಂಜಿಸುವೆವು ಎಂದು ಹೇಳಲಾಗಿ; ಅಲ್ಲಿ ಕಪ್ಪೆ ಮೀನುಗಳು ಏನಾದರೂ ಉಂಟೋ? ಎಂದು ಕೊಂಗನು ಮರಳಿ ಪೃಚ್ಛೆ ಮಾಡಲು; ಇಲ್ಲವೆಂದು, ಹಂಸೆ ಹೇಳಿತು. ಆಗ ಆ ಬಕವು ಪಕಪಕನೇ ನಕ್ಕು, ಮಾನಸ ಸರೋವರವು ಬಹು ರಮಣೀಯ್ಯವಾದ ಸ್ಥಳವೆಂದು, ಬಹು ಸ್ತೋತ್ರವನ್ನು ಮಾಡುತ್ತಾ ಇದ್ದೀ; ಕಪ್ಪೆಗಳೂ ಮೀನುಗಳೂ ಇಲ್ಲದ ಸ್ಥಳದಲ್ಲಿ ಏನು ಸ್ವಾರಸ್ಯ ಇರುವದು? ನಿನಗೆ ಅವುಗಳ ಸ್ವಾರಸ್ಯವು ತಿಳಿಯದಕಾರಣ, ಅಲ್ಲಿನ ವಸ್ತುವುಗಳೇನೋ ಬಹು ಶ್ರೇಷ್ಠವೆಂದು, ಹರಟುತ್ತೀ, ಎಂದು ಹೇಳಿ, ಪರಿಹಾಸ್ಯವು ಮಾಡಿತು. ಆದಕಾರಣ ಯಾರಾದರೂ ತಮಗೆ ಇಷ್ಟವಾದ ಪದಾರ್ಥವು, ಬಹು ಹೀನವಾದದ್ದಾದರೂ, ಬಹಳ ಶ್ರೇಷ್ಠವೆಂದು, ಅನ್ನುವರು. ತಮಗೆ ಇಷ್ಟವಲ್ಲದ್ದು, ಬಹಳ ಯೋಗ್ಯವಾದ ಪದಾರ್ಥ ಆದಾಗ್ಯೂ, ಹೀನವಾಗಿ ತಿಳಿಯುವರು.

## ೬೭. ಕಥೆ.

### ನರಿಯ ನೂ ಕೋಳಿಯ ನೂ ಕುರಿತದ್ದು.

ಒಂದಾನೊಂದು ಊರಿನಲ್ಲಿರುವ ಒಂದು ಮನೆಯಲ್ಲಿ ಕೋಳಿಗಳು ಮಂಚಿಗೆ ಗೂಡಿನಲ್ಲಿ ರಾತ್ರಿ ನಿದ್ದೆ ಮಾಡುತ್ತಿದ್ದವು. ಆ ಸಂಗತಿಯನ್ನು ಅರಿತು, ಒಂದು ನರಿಯು ಆ ಗೂಡಿನ ಬಳಿಗೆ ಬಂದು, ಮೇಲೆ ಹೋಗುವದಕ್ಕೆ ಸಾಮರ್ಥ್ಯವಿಲ್ಲದೆ, ಕೆಳಗಡೆ ಕೂತು ಕೊಂಡು, ಮೋರೆಯನ್ನು ಎತ್ತಿ, ಆ ಕೋಳಿಗಳನ್ನು ನೋಡಿ, ಇವುಗಳನ್ನು ಮೋಸದಿಂದ ಕೊಂದು, ತಿನ್ನ ಬೇಕೆಂದೆಣಿಸಿ, ಎಲೇ, ಕೋಳಿಗಳಿರಾ, ಕೋಳಿಗಳಿರಾ, ನನ್ನ ಮಾತನ್ನು ಲಾಲಿಸಿ, ಕೇಳಿರಿ;- ನಾಳೆ ಉದಯವಾಗುವ ಹಗಲು ಬಳ್ಳೇ ಸುದಿವಸವಾಗಿರುವದು. ಹ್ಯಾಗಂದರೆ ಈ ಲೋಕದಲ್ಲಿರುವ ಜೀವ ಜಂತುಗಳು ಯಾವತ್ತು ಒಂದು ಸ್ಥಳದಲ್ಲಿ ನಿನ್ನೆ ದಿವಸ ಕೂಡಿ, ಸಂಕೇತ ಮಾಡಿ ಇರುವದೇನಂದರೆ,- ನಾಳೆ ದಿವಸದಿಂದ ಸಮಸ್ತ ಮೃಗ ಜಾತಿಗಳೂ ಪಕ್ಷಿ ಜಾತಿಗಳು ಸಹ, ಯಾವತ್ತು ಜೀವ ಜಂತುಗಳೂ ಈಗಲಿರುವ ಜಾತಿ ವೈರಗಳನ್ನು ಬಿಟ್ಟು, ಎಲ್ಲಾ ಏಕ ಮನಸ್ಸಾಗಿ ವ್ಯಾಜ್ಯಗಳಾಡದೆ, ಕೊಂದಾಡದೆ, ಗುದ್ದ್ಯಾಡದೆ ಇರ ಬೇಕು. ಈ ಮೇರಿಗೆ ಸಂಕೇತ ನಿಶ್ಚಯ ಮಾಡಿ ಇರುವ ಸಮಾಚಾರ ನಿಮಗೆ ತಿಳಿಸಿದೆನು. ಈಗ ನೀವೆಲ್ಲರು ಕೆಳೀಕೆ ಇಳಿದು ಬನ್ನಿರಿ; ನಾನು ಸಹಾ ನಾವು ಒಬ್ಬರಿಗೊಬ್ಬರು ಸಂತೋಷವಾಗಿರೋಣ ಎಂದು, ಕೂಗಿ ಹೇಳುವ ನರಿಯ ಮಾತನ್ನು ಕೇಳಿ, ಮುಂಝಾವಿನಲ್ಲಿ ಎಚ್ಚತ್ತಿರುವ ಬುದ್ಧಿಯುಳ್ಳ ಕೋಳಿ ಆ ನರಿಗೆ ಹೇಳಿದ್ದೇ

ನಂದರೆ, ಎಲೋ, ನರಿಯೇ, ನಿನ್ನ ಮಾತು ಕೇಳುವದಕ್ಕೆ ಬಹಳ ಚನ್ನಾಗಿದೆ; ಈ ಅರ್ಥವನ್ನು ಮುಂಚಿತವಾಗಿ ತಿಳಿಸಿದ ನಿನಗೆ ಸಲಾಂ ಮಾಡಿದೆವು; ಈ ಮಾತಿಗೆ ಪ್ರತ್ಯುತ್ತರವನ್ನು, ಇನ್ನು ಸ್ವಲ್ಪ ಹೊತ್ತು ನಿದ್ರೆ ಮಾಡಿದ ತರುವಾಯು, ಹೇಳುವೆವು. ಆದರೆ, ಅಗೋ, ನೋಡು; ಕುರಿ ದೊಡ್ಡಿಯಿಂದ ಎರಡು ಬೇಟೆ ನಾಯಿಗಳು ಗಳ್ಳು ಹಾಕಿ ಕೊಂಡು, ಬಹು ಜಾಗ್ರತೆಯಿಂದ ಬರುತ್ತವೆ, ಅನ್ನಲು; ನೋಡುವದಕ್ಕೆ ಮುಂಚಿತವಾಗಿಯೇ, ಆ ನರಿಯು ಗಡಗಡೆಂದು ನಡುಗಲಾರಂಭಿಸಿತು. ಅದನ್ನು ನೋಡಿ, ಈ ಕೋಳಿಯು, ಎಲೇ, ನರಿಯೇ, ಯಾಕೆ ನೀನು ನಾಯಿಗಳು ಬರುವ ವರ್ತಮಾನವನ್ನು ಕೇಳಿ, ನಡುಗುತ್ತೀ? ಈ ಲೋಕದಲ್ಲಿ ಎಲ್ಲಾ ಜೀವ ಜಂತುಗಳು ಒಂದಕ್ಕೊಂದು ಜಾತಿ ವೈರಗಳಿಲ್ಲದೆ ಸ್ನೇಹಿಸುವ ಸಮಾಚಾರ ನೀನೇ ಹೇಳಿದಿಯಲ್ಲಾ? ಇದ್ಯಾಕೆ ಭಯ ಪಡುವ ಹಾಗೆ ಕಾಣುತ್ತೀ? ಅನ್ನಲು; ನರಿಯು, ಆದರೆ ಈ ಭೂಮಂಡಲ ಬಹಳ ವಿಸ್ತಾರವಾದದ್ದು; ಆದಕಾರಣ ಎಲ್ಲಾ ಕಡೆಯೂ ಈ ಸಮಾಚಾರ ಪ್ರಸಿದ್ಧವಾಯಿತೋ? ಇನ್ನು ಆಗಲಿಲ್ಲವೋ? ಈ ನಾಯಿಗಳ ಬರುವಿಕೆ ಕೇಳಿದರೆ, ನನಗೆ ಸಂದೇಹ ತೋರುತ್ತದೆ; ಸಂದೇಹದ ಸಂಗಡಲೇ ಭಯವು ಶಿದ್ಧವಾಗಿ ಇಥೆ ಎಂದು, ಬಾಲವನ್ನು ಮುದಿರಿ ಕೊಂಡು, ನೆಲವನ್ನು ಮೂಸಿ ನೋಡುತ್ತಾ, ಓಡಿ ಹೋಯಿತು. ಆದ್ದರಿಂದ ಮಿತ್ರಭೇದ ಮಾಡುವದಕ್ಕೆ ಬರುವ ಶತ್ರುಗಳ ಲಕ್ಷಣವನ್ನು ಬುದ್ಧಿವಂತರು ಜಾಗ್ರತೆಯಿಂದ ತಿಳಿದು ಕೊಂಡರೆ, ಸೌಖ್ಯ ಹೊಂದುವರು.

## ೬೮. ಕಥೆ.

### ತೆನ್ನಾಲರಾಮಕೃಷ್ಣನನ್ನೂ ಬ್ರಾಹ್ಮಣರನ್ನೂ ಕುರಿತದ್ದು.

ಒಬ್ಬ ರಾಯನಿದ್ದನು. ಒಂದು ದಿವಸ ಆತನ ತಾಯಿ ಸತ್ತು ಹೋದಳು. ಸತ್ತು ಹೋಗುವ ಕಾಲದಲ್ಲಿ ಮಗನನ್ನು ನೋಡಿ, ಮಾವಿನ ಹಣ್ಣು ತಿನ್ನ ಬೇಕೆಂಬ ಆಶೆ ಬಹಳವಾಗಿ ಇಧೆ; ಆದ್ದರಿಂದ ಕೆಲವು ಹಣ್ಣುಗಳನ್ನು ತರಿಸು, ಅಂದಳು. ಕೂಡಲೇ ಆಳುಗಳನ್ನು ಪೇಟೆಗೆ ಕಳುಹಿಸಿ, ಹಣ್ಣುಗಳನ್ನು ತಂದು, ಆಕೆಗೆ ಕೊಡುವ ಒಳಗಾಗಿ ಸತ್ತು ಹೋದಳು. ರಾಯನು ತನ್ನ ತಾಯಿಯ ಅಭಿಲಾಷೆ ಪೂರ್ತಿ ಮಾಡುವದಕ್ಕೆ ಇಲ್ಲದೆ ಹೋಯಿತೆಂದು, ವ್ಯಸನವನ್ನು ಹೊಂದಿ, ಕೆಲವು ಬ್ರಾಹ್ಮಣರನ್ನು ಕರಿಸಿ, ನನ್ನ ತಾಯಿ ಮಾವಿನ ಹಣ್ಣು ತಿನ್ನ ಬೇಕೆಂಬ ಆಶೆಯಿಂದ ಸತ್ತು ಹೋದಳು; ಆ ಆತ್ಮಕ್ಕೆ ತೃಪ್ತಿಮಾಡುವದಕ್ಕೆ ಏನು ಮಾಡ ಬೇಕೆಂದು, ಕೇಳಿದನು. ಅದಕ್ಕೆ ಅವರು ಭಂಗಾರದಲ್ಲಿ ಮಾವಿನ ಹಣ್ಣು ಮಾಡಿಸಿ, ಶ್ರಾದ್ಧ ಕಾಲದಲ್ಲಿ ಕೆಲವು ಬ್ರಾಹ್ಮಣರಿಗೆ ದಾನಾ ಮಾಡಿದರೆ, ಆ ಆತ್ಮಕ್ಕೆ ತೃಪ್ತಿ ಆಗುವದೆಂದು, ಹೇಳಿದರು. ಆ ಕಾಲದಲ್ಲಿ ರಾಯನು, ಅದು ನಿಶ್ಚಯವೆಂದೆಣಿಸಿ, ಅದೇ ಪ್ರಕಾರವೇ ದಾನಾ ಮಾಡಿದನು. ರಾಯನ ಬಳಿಯಲಿರುವ ತೆನ್ನಾಲರಾಮಕೃಷ್ಣನು ಅದನ್ನು ನೋಡಿ, ಆ ದಾನವನ್ನು ತಕ್ಕೊಂಡ ಬ್ರಾಹ್ಮಣರ ಸಂಗಡ ತನ್ನ ತಾಯಿಗೆ ಈ ದಿವಸ ಶ್ರಾದ್ಧವೆಂದು ಹೇಳಿ, ತನ್ನ ಮನೆಗೆ ಕರಕೊಂಡು ಹೋಗಿ, ತನ್ನ ಸೇವಕರ ಸಂಗಡ, ಸಾಟಿನ ಕಾಮು ಕಾಯ ಹಾಕಿ ಕೊಂಡು ಬಾ ಎಂದು, ಹೇಳಿ

ದನು. ಅವರು ಅದೇ ಮೇರಿಗೆ ತಕ್ಕೊಂಡು ಬಂದು, ಕೊಡಲು, ಅವನು ಪದ್ಧತೀ ಪ್ರಕಾರ ಶ್ರಾದ್ಧ ಮಾಡಿ, ಬ್ರಾಹ್ಮಣರಿಗೆ ಕೊಡದೆ, ಜನ ಒಂದಕ್ಕೆ ಎರಡು ಎರಡು ಬರೆಗಳ ಪ್ರಕಾರ ಹಾಕಿದನು. ಅದರಿಂದ ಅವರು ಅಳುತ್ತಾ, ಹೋಗಿ, ರಾಯನ ಸಂಗಡ ಈ ವರ್ತಮಾನವನ್ನು ಅರಿಕೆ ಮಾಡಿದರು. ರಾಯನು ತೆನ್ನಾಲರಾಮಕೃಷನನ್ನು ಕರಿಸಿ, ಯಾಕೆ ಈ ಮೇರಿಗೆ ಮಾಡಿದೆ? ಎಂದು ಕೇಳಲಾಗಿ; ಸ್ವಾಮಿ, ನನ್ನ ತಾಯಿ ಮರಣ ಕಾಲದಲ್ಲಿ, ಎರಡು ಬರೆ ಹಾಕು ಎಂದು, ಇಛ್ಛೈಸಿದಳು; ಆ ಮೇರಿಗೆ ಮಾಡುವಷ್ಟರೊಳಗೆ ಸತ್ತು ಹೋದಳು. ಆದದರಿಂದ ಆ ಆತ್ಮಕ್ಕೆ ತೃಪ್ತಿ ಆಗುವದಕ್ಕೋಸ್ಕರ ನಾನು ಈ ಮೇರಿಗೆ ಮಾಡಿದೆನೆಂದು, ರಾಮಕೃಷ್ಣನು ಹೇಳಿದನು. ರಾಯನು ಆ ಮಾತು ಕೇಳಿ, ನಕ್ಕು, ಅವನನ್ನು ಕಳುಹಿಸಿ ಬಿಟ್ಟನು.

## ೬೯. ಕಥೆ.

### ತೆನ್ನಾಲರಾಮಕೃಷ್ಣನನ್ನೂ ಅರಮನೆಯ ಪಹರೆದವರನ್ನೂ ಕುರಿತದ್ದು.

ಒಂದು ದಿವಸ ತೆನುಗು ದೇಶದಿಂದ ಭಾಗವತ ವೇಷಧಾರಿಗಳು ತಮ್ಮ ವಿದ್ಯವನ್ನು ರಾಯನಿಗೆ ತೋರಿಸುವದಕ್ಕೆ ಬಂದರು. ರಾಯನು ಅವರಿಗೆ ಬಹಳ ಮರ್ಯಾದೆ ಮಾಡಿ, ಅವರಿಗೆ ಆಟಕ್ಕೆ ಅಪ್ಪಣೆ ಕೊಟ್ಟು, ಅಲ್ಲಿಗೆ ತೆನ್ನಾಲ ರಾಮಕೃಷ್ಣನನ್ನು ಬಿಡ ಬೇಡವೆಂದು, ಎರಡು ಪಹರೆದವರಿಗೂ ಆಜ್ಞೆ ಮಾಡಿದನು. ಆಟದ ಸಮಯದಲ್ಲಿ

ಈ ರಾಮ ಕೃಷ್ಣನು ಪಹರೆದವರ ಬಳಿಗೆ ಹೋಗಿ, ನನ್ನ ನ್ನು ಒಳಕ್ಕೆ ಬಿಡಿರಿ; ನನಗೆ ಬರುವ ಬಹುಮಾನದಲ್ಲಿ ಅ ರ್ಧವು ನಿಮಗೆ ಕೊಡುವೆನೆಂದು ಸಮ್ಮತಿ ಪಡಿಸಿ, ಒಳ ಗೆ ಹೋಗಿ, ಅಲ್ಲಿ ಸುಮ್ಮನೆ ಇರದೆ, ಕೃಷ್ಣ ವೇಷವನ್ನು ಕಡಗೋಲಿನಿಂದ ಹೊಡೆದನು. ಅದರಿಂದ ಅವನು, ಅ ಯ್ಯಯ್ಯೋ ಎಂದು ಅತ್ತನು. ಅದರ ತರುವಾಯ, ಕೃ ಷ್ಣಸ್ವಾಮಿಯು ಅನೇಕ ಗೋಪಿ ಸ್ತ್ರೀಯರ ಬಳಿಯು ಕ ಡಗೋಲಿನಿಂದ ಪ್ರಹರಗಳು ತಿನ್ನಲಿಲ್ಲವೇ? ಆ ವೇಷವು ಧರಿಸಿದ ನೀನು ಯಾಕೆ ಒಂದು ಪೆಟ್ಟಗೆ ತಾಳಲಾರೆ? ಅಂ ದನು. ರಾಯನು ಅದನ್ನು ನೋಡಿ, ಇವನನ್ನು ಹೊರಗೆ ತಕ್ಕೊಂಡು ಹೋಗಿ, ಇಪ್ಪತ್ತು ನಾಲ್ಕು ದೆಬ್ಬೆಗಳು ಹೊ ಡಿಯಿರಿ ಎಂದು, ಸೇವಕರಿಗೆ ಆಜ್ಞೆ ಕೊಟ್ಟನು. ಅವರು ಹೊರಗೆ ತೆಗದು ಕೊಂಡು ಹೋಗುವ ಕಾಲದಲ್ಲಿ, ಮೊ ದಲಿನ ಆ ಇಬ್ಬರು ಪಹರೆದವರನ್ನ ನೋಡಿ, ನೀವು ನನ್ನ ನ್ನು ಒಳಗೆ ಬಿಟ್ಟದ್ದಕ್ಕೆ ಏನು ಕೊಡುವೆನೆಂದು ಹೇಳಿದೆ ನೆಂದು, ಕೇಳಿದನು. ಅದಕ್ಕವರು, ಇವನು ಇನಾಮವಾಗಿ ತುಂಬಾ ಹಣ ತರುತ್ತಾ ಇದ್ಧಾನೆಂದು ನೆನಸಿ—ರಾಯನು ಕೊಡುವದರಲ್ಲಿ ಅರ್ಧವು ಕೊಡುತ್ತೇನೆಂದು ಹೇಳಿದಿ, ಅಂದರು. ಆಗಲವನು ನನಗೆ ಕೊಟ್ಟ ಇಪ್ಪತ್ತು ನಾಲ್ಕು ದೆಬ್ಬೆಗಳಲ್ಲಿ ಸರಿಯಾಗಿ ಈ ಇಬ್ಬರಿಗೂ ಹಂಚಿ ಕೊಡಿ ರಿ ಎಂದು, ಸೇವಕರನ್ನು ಕೇಳಿ ಕೊಂಡು, ತಾನು ತಪ್ಪಿಸಿ ಕೊಂಡು, ಹೊರಟನು.

## ೭೦. ಕಥೆ.

ಹಾಡುವವನನ್ನೂ ಅಗಸಗಿತ್ತಿಯನ್ನೂ ಕುರಿತದ್ದು.

ತನ್ನ ತಪ್ಪನ್ನು ತಿಳಿಯದ ಒಬ್ಬ ಹಾಡುವವನು, ಪರದೇಶದ ರಾಯನ ಹತ್ತರ ಸಂಗೀತವನ್ನು ಹಾಡಿ, ಬಹುಮಾನವನ್ನು ಹೊಂದ ಬಹುದೆಂದು, ಬಂದು; ಆ ಪಟ್ಣದಲ್ಲಿ ಒಂದು ಮನೆಯಲ್ಲಿ ಇಳಿದನು. ಮರು ದಿವಸ ಬೆಳಗಾಗುವ ಕಾಲದಲ್ಲಿ ಎದ್ದು, ಹಾಡನ್ನು ಸಾಧಕಾ ಮಾಡಿದನು. ನೆರೆಮನೆಯ ಅಗಸಗಿತ್ತಿ ದೊಡ್ಡ ಕೊರಳಿಂದ ಅತ್ತಳು. ಇವನು ಹಾಡಿ ಬಿಟ್ಟ ಕೂಡಲೇ, ಅವಳೂ ಅಳುವಿಕೆಯನ್ನು ಬಿಟ್ಟಳು. ಹೀಗೆಯೇ ಎಂಟು ದಿವಸದ ವರಿಗೂ ನಡಿಯಿತು. ಆದದರಿಂದ ಹಾಡುವವನು ಅಗಸಗಿತ್ತಿಯನ್ನು ಕರಿಸಿ, ನಾನು ಹಾಡುವಾಗ್ಯೆ ನೀನು ಯಾತಕ್ಕೆ ಅಳುತ್ತೀ? ಅಂದನು. ಅವಳು, ಅಪ್ಪಾ, ತಮ್ಮ ಚಿನ್ನದ ಕೊರಳನ್ನು ಕೇಳುವಾಗ, ಹೋದ ತಿಂಗಳು ಸತ್ತು ಹೋದ ನನಗೆ ಇದ್ದ ಒಂದೇ ಕತ್ತೆಯ ನೆನಪು ಬರುತ್ತದೆ; ಆದದರಿಂದ ಅಳುತ್ತೇನೆಂದು ಹೇಳಿ, ಅತ್ತಳು. ಹಾಡುವವನು ನಾಚಿಕೆ ಪಟ್ಟು, ರಾಯನನ್ನು ಕಾಣದೆ, ತನ್ನ ಊರಿಗೆ ಹೋಗಿ ಬಿಟ್ಟನು. ಆದದರಿಂದ ತನ್ನ ತಪ್ಪು ತಿಳಿಯದೆ ನಡಿಯುವ ಬುದ್ಧಿಹೀನನು ಲೋಕದಲ್ಲಿ ಅವಮಾನ ಪಡುವನು.

ಸಂಪೂರ್ಣವು.

INDIAN SCHOOL SERIES.

THE

# SEVENTY STORIES

IN

## CANARESE;

FORMING

A SERIES OF PROGRESSIVE LESSONS,

ESPECIALLY

ADAPTED TO THE USE OF CANARESE STUDENTS

IN THEIR

EARLIER STUDIES, AND FOR SCHOOLS.

---

ಎಪ್ಪತ್ತು ಕಥೆಗಳ ಪುಸ್ತಕವು.

---

*FIFTH EDITION.*

---

BANGALORE:

PRINTED AT THE WESLEYAN MISSION PRESS.

1860.

